WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜುಲೈ ೧೨, ೨೦೧೨ (ಆಷಾಢ ೨೧, ಶಕ ವರ್ಷ ೧೯೩೪) | ಸಂಚಿಕೆ ೨೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಖಾಲಿಯಿರುವ 18 ವೈಜ್ಞಾನಿಕ ಸಹಾಯಕರ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿಬ್ಬಂದಿ –6/64/2009–10, ದಿನಾಂಕ: 02–02–2012 ಮತ್ತು 21–03–2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ನ್ಯಾಯ ವಿಜ್ಞಾನ ಪ್ರಯೋಗಾಲಯದ ವೈಜ್ಞಾನಿಕ ಸಹಾಯಕರ 42 ಹುದ್ದೆಗಳಿಗೆ ಈಗಾಗಲೇ ಸರ್ಕಾರ ಅನುಮತಿ ನೀಡಿರುವಂತೆ ಹಾಗೂ ಮುಂಬಡ್ತಿಯಿಂದ ತೆರವಾಗಿರುವ 18 ಹುದ್ದೆಗಳು ಒಟ್ಟು 60 ಹುದ್ದೆಗಳನ್ನು ಒಂದೇ ಬಾರಿ ನೇರ ನೇಮಕಾತಿ ಮೂಲಕ ಭರ್ತಿ ಮಾಡುವುದರಿಂದ ಆ ಘಟಕದ ಕಾರ್ಯಗಳು ಸುಗಮವಾಗಿ ಜರುಗಲು ಅನುಕೂಲವಾಗುವುದರಿಂದ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಮುಂಬಡ್ತಿಯಿಂದ ಖಾಲಿಯಿರುವ 18 ವೈಜ್ಞಾನಿಕ ಸಹಾಯಕ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ ಡಿಜಿ ಮತ್ತು ಐಜಿಪಿ ರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರ. ಸಂ. | ಹುದ್ದೆಗಳು | ಮಂಜೂರಾದ ಹುದ್ದೆಗಳು | ಸರ್ಕಾರದ ಅನುಮತಿಯಂತೆ ಈಗಾಗಲೆ ನೇಮಕಾತಿಗೆ ಕ್ರಮ ಕೈಗೊಳ್ಳಲಾಗುತ್ತಿರುವ ಹುದ್ದೆಗಳ ಸಂಖ್ಯೆ | ಸರ್ಕಾರದಿಂದ ಅನುಮತಿ ನೀಡಬೇಕಾದ ರಿಕ್ತ ಸ್ಥಾನಗಳು |
|---|---|---|---|---|
| 1 | 2 | 3 | 4 | 5 |
| 1 | ವೈಜ್ಞಾನಿಕ ಸಹಾಯಕರು, (ಜೀವಶಾಸ್ತ್ರ ವಿಭಾಗ) | 19 | 13 | 06 |
| 2 | ವೈಜ್ಞಾನಿಕ ಸಹಾಯಕರು, (ವಿಷ ವಿಜ್ಞಾನ ವಿಭಾಗ) | 25 | 17 | 08 |
| 3 | ವೈಜ್ಞಾನಿಕ ಸಹಾಯಕರು, (ರಸಾಯನಿಕ ವಿಭಾಗ) | 03 | 03 | 00 |
| 4 | ವೈಜ್ಞಾನಿಕ ಸಹಾಯಕರು, (ಭೌತಶಾಸ್ತ್ರ ವಿಭಾಗ) | 03 | 02 | 01 |
| 5 | ವೈಜ್ಞಾನಿಕ ಸಹಾಯಕರು, (ದಸ್ತಾವೇಜು ವಿಭಾಗ) | 02 | 02 | 00 |
| 6 | ವೈಜ್ಞಾನಿಕ ಸಹಾಯಕರು, (ಬಂದೂಕು ವಿಭಾಗ) | 03 | 01 | 02 |

| | | | | |
|---|---|---|---|---|
| 7 | ವೈಜ್ಞಾನಿಕ ಸಹಾಯಕರು, (ಮನೋವಿಜ್ಞಾನ ವಿಭಾಗ) | 09* | 00 | 00 |
| 8 | ವೈಜ್ಞಾನಿಕ ಸಹಾಯಕರು, (ಛಾಯಚಿತ್ರ ವಿಭಾಗ) | 05 | 04 | 01 |
| | ನೇರ ನೇಮಕಾತಿಯಿಂದ ತುಂಬಲು ಲಭ್ಯವಿರುವ ಒಟ್ಟು ಹುದ್ದೆಗಳ ಸಂಖ್ಯೆ | 69 | 42 | 18 |

- ವೈಜ್ಞಾನಿಕ ಸಹಾಯಕರು, ಮನೋವಿಜ್ಞಾನ ವಿಭಾಗಕ್ಕೆ ಮಂಜೂರಾಗಿರುವ 09 ಹುದ್ದೆಗಳನ್ನು ಘಟಕದ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಲಾಗಿಲ್ಲ. ಆದ್ದರಿಂದ ಇ ಹುದ್ದೆಗಳನ್ನು ಭರ್ತಿ ಮಾಡುವ ಅಗತ್ಯವಿರುವುದಿಲ್ಲ.

ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 07 ಪೊಸಿಲಿ 2012 ಬೆಂಗಳೂರು, ದಿನಾಂಕ : 28–05–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಖಾಲಿ ಇರುವ ವೈಜ್ಞಾನಿಕ ಸಹಾಯಕರ ಹುದ್ದೆಗಳ ಪೈಕಿ 8 ವೈಜ್ಞಾನಿಕ ಸಹಾಯಕರ ಹುದ್ದೆಗಳನ್ನು ಮಾತ್ರ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನೇರ ನೇಮಕಾತಿಯಿಂದ ಭರ್ತಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ168 ವೆಚ್ಚ–11 2012 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.(ಪೊಲೀಸ್ ಸೇವೆಗಳು)

ಪಿ.ಆರ್. 1557

## ಒಳಾಡಳಿತ ಸಚಿವಾಲಯ

**ಸೇರ್ಪಡೆ**

ಸಂಖ್ಯೆ: ಒಇ 553 ಪಿಪಿಇ 2011, ಬೆಂಗಳೂರು, ದಿನಾಂಕ: 28–05–2012

ಸರ್ಕಾರಿ ಆದೇಶ ಸಂಖ್ಯೆ: ಒಇ 553 ಪಿಪಿಇ 2011, ದಿನಾಂಕ: 09–01–2012 ಮತ್ತು ದಿನಾಂಕ: 16–02–2012ರ 2ನೇ ಪುಟದ ಪ್ರಸ್ತಾವನೆ ಭಾಗದ ಕಂಡಿಕೆ: 2ರ ಐದನೇ ಸಾಲಿನಲ್ಲಿ ಕಂಡಿಕೆ: 4ರ ಎರಡು ಮತ್ತು ನಾಲ್ಕನೇ ಸಾಲಿನಲ್ಲಿ, 3ನೇ ಪುಟದ ಮೊದಲನೇ ಕಂಡಿಕೆಯ 6ನೇ ಸಾಲಿನಲ್ಲಿ ಹಾಗೂ ಪುಟ 3ರಲ್ಲಿ ಆದೇಶ ಭಾಗದ 4ನೇ ಸಾಲಿನಲ್ಲಿ **"ಕಲಂ 13(2)ರ"** ಎಂದಿರುವುದರ ನಂತರ **"ಮತ್ತು ಕಲಂ 201 ಐ.ಪಿ.ಸಿ.ರ"** ಎಂಬುವುದನ್ನು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದು. ಉಳಿದಂತೆ, ಸದರಿ ಸರ್ಕಾರಿ ಆದೇಶ ಸಂ: ಒಇ 553 ಪಿಪಿಇ 2011, ದಿನಾಂಕ: 09–01–2012 ಮತ್ತು 16–02–2012ರಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಮೇಲ್ಕಂಡ ಸೇರ್ಪಡೆ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 28–05–2012ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು–ಬಿ)

ಪಿ.ಆರ್. 1558

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಹೆಚ್ಚುವರಿಯಾಗಿ ಸೃಜಿಸಲಾಗಿದ್ದ ಅರಕ್ಷಕ ಉಪ ಅಧೀಕ್ಷಕರ ಹುದ್ದೆಯನ್ನು ರದ್ದುಪಡಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ನಅಇ 219, ಬೆಂಅಸೇ 2009, ದಿನಾಂಕ: 01–03–2010.
2. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಬೆಂಅಪ್ರಾ.ಉಕಾ–1/ಸಿ.ವಿ/1572/2011–12, ದಿನಾಂಕ: 29–03–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 1–3–2010ರ ಆದೇಶದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಭದ್ರತೆಯನ್ನು ಹೆಚ್ಚಿಸುವ ಸಲುವಾಗಿ, ಪ್ರಾಧಿಕಾರದ ವಿಶೇಷ ಕಾರ್ಯನಿರತ ಪಡೆ ಮತ್ತು ಜಾಗೃತದಳ ಶಾಖೆಗೆ ಹೆಚ್ಚುವರಿಯಾಗಿ ಒಂದು ಅರಕ್ಷಕ ಉಪ ಅಧೀಕ್ಷಕರ ಹುದ್ದೆಯನ್ನು (ವೇತನ

ಶ್ರೇಣಿ 14050-25050) ಸೃಜಿಸಲು ಹಾಗೂ ಈ ಹುದ್ದೆಯನ್ನು ಪೊಲೀಸ್ ಇಲಾಖೆಯಿಂದ ನಿಯೋಜನೆ ಮೇಲೆ ತುಂಬಲು ಮತ್ತು ಸದರಿ ಹುದ್ದೆಗೆ ತಗಲುವ ವೇತನ ಭತ್ಯೆಗಳನ್ನು ಪ್ರಾಧಿಕಾರವೇ ಭರಿಸತಕ್ಕದೆಂಬ ಷರತ್ತಿನೊಂದಿಗೆ ಮಂಜೂರಾತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 29-3-2012ರ ಪತ್ರದಲ್ಲಿ ಆಯುಕ್ತರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರು ಮೇಲೆ (1)ರಲ್ಲಿ ಹೆಚ್ಚುವರಿಯಾಗಿ ಮಂಜೂರಾಗಿರುವ ಡಿ.ವೈ.ಎಸ್.ಪಿ. ಹುದ್ದೆಯ ಅವಶ್ಯಕತೆ ಪ್ರಾಧಿಕಾರಕ್ಕೆ ಇರುವುದಿಲ್ಲವೆಂದು ತಿಳಿಸಿ, ಸದರಿ ಡಿ.ವೈ.ಎಸ್.ಪಿ. ಹುದ್ದೆಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 74 ಬೆಂಅಸೇ 2011 ಬೆಂಗಳೂರು, ದಿನಾಂಕ: 21-05-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಸರ್ಕಾರದ ಆದೇಶ ಸಂಖ್ಯೆ: ನಅಇ 219 ಬೆಂಅಸೇ 2009, ದಿನಾಂಕ: 01-03-2010 ರಲ್ಲಿ ಹೆಚ್ಚುವರಿಯಾಗಿ, ಸೃಜಿಸಲಾಗಿದ್ದ, ಅರಕ್ಷಕ ಉಪ ಅಧೀಕ್ಷಕರ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಚಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 1559

## ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವಾಲಯ

**ವಿಷಯ :** 2011-12ನೇ ಸಾಲಿನಲ್ಲಿ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಆಯ್ಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 3 ಇಎನ್‌ಜಿ 2012, ದಿನಾಂಕ: 15-03-2012.

2. ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಸಭೆ ದಿನಾಂಕ: 10-05-2012ರ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವ ಸಲುವಾಗಿ 2011-12ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ನೀಡಲು ಸರ್ಕಾರವು ಉದ್ದೇಶಿಸಿದೆ. ಈ ಪ್ರಶಸ್ತಿ ತಲಾ ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳು (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ, ಟ್ರಸ್ಟುಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಆರಂಭಶೀಲತೆ/ಕೊಡುಗೆ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ರೀತಿ ವಿಶಿಷ್ಟ ಸೇವೆ ಸಲ್ಲಿಸಿರುವವರಿಂದ ಮತ್ತು ಅದರ ಬಗ್ಗೆ ಅರಿವಿರುವವರಿಂದ ಅರ್ಜಿ/ನಾಮನಿರ್ದೇಶನ ಕೋರಿ ದಿನಾಂಕ: 23-02-2012 ರಂದು ಪ್ರಕಟಣೆ ಹೊರಡಿಸಲಾಗಿದೆ. ಈ ಪ್ರಕಟಣೆಯ ಸಂಕ್ಷಿಪ್ತ ವಿವರಗಳನ್ನು ಪ್ರಜಾವಾಣಿ ಮತ್ತು ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಗಲ್ಲಿ ಪ್ರಕಟಿಸಲಾಗಿದೆ. ಅಲ್ಲದೆ, ಈ ಪ್ರಕಟಣೆಯ ಪ್ರತಿಯನ್ನು ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಕಚೇರಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ, ಕೆರೆ ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಜೀವವೈವಿಧ್ಯ ಮಂಡಳಿ, ಇಲಾಖೆಯ ಎಲ್ಲಾ ಪ್ರಾದೇಶಿಕ ನಿರ್ದೇಶಕರ ಕಚೇರಿಗಳು ಮತ್ತು ಇಲಾಖಾ ವೆಬ್‌ಸೈಟ್‌ಗಳಲ್ಲೂ ಪ್ರಕಟಿಸಲಾಗಿತ್ತು. ಈ ಪತ್ರಿಕಾ ಪ್ರಕಟಣೆಯನುಸಾರ ನಾಮನಿರ್ದೇಶನ/ಮನವಿ ಸ್ವೀಕರಿಸಲು ದಿನಾಂಕ: 09-04-2012 ನ್ನು ಅಂತಿಮ ದಿನಾಂಕವೆಂದು ನಿಗದಿಪಡಿಸಲಾಗಿತ್ತು. ಪ್ರಕಟಣೆಯ ರೀತ್ಯಾ ರಾಜ್ಯದ ಮೂರು ವಲಯಗಳಲ್ಲಿನ ತಲಾ ಒಬ್ಬ ವ್ಯಕ್ತಿ ಮತ್ತು ಒಂದು ಸಂಸ್ಥೆಯನ್ನು ಪ್ರಶಸ್ತಿಗೆ ಪರಿಗಣಿಸಲು ಉದ್ದೇಶಿಸಲಾಗಿದ್ದು, ಈ ಪ್ರತಿ ವಲಯದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳನ್ನು ಕೆಳಕಂಡಂತೆ ವಿಂಗಡಿಸಲಾಗಿತ್ತು.

(i) ದಕ್ಷಿಣ ವಲಯ, ಮಂಡ್ಯ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳು

(ii) ಮಲೆನಾಡು ಮತ್ತು ಕರಾವಳಿ ವಲಯ: ಬೆಳಗಾಂ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಕೊಡಗು, ಚಾಮರಾಜನಗರ, ಹಾಸನ, ದಕ್ಷಿಣ ಕನ್ನಡ, ಉತ್ತರ ಕನ್ನಡ ಮತ್ತು ಉಡುಪಿ ಜಿಲ್ಲೆಗಳು

(iii) ಉತ್ತರ ವಲಯ : ದಾವಣಗೆರೆ, ಚಿತ್ರದುರ್ಗ, ಹಾವೇರಿ, ಧಾರವಾಡ, ಗದಗ್, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಬೀದರ್, ಗುಲ್ಬರ್ಗಾ, ಯಾದಗಿರ್, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು.

ಮೇಲ್ಕಂಡ ಪ್ರಕಟಣೆಯನುಸಾರ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ಕೋರಿ ಒಟ್ಟು 43 ನಾಮನಿರ್ದೇಶನ/ಮನವಿ ಸ್ವೀಕೃತವಾಗಿದ್ದು, ಇದರಲ್ಲಿ 30 ವ್ಯಕ್ತಿಗತ ನಾಮನಿರ್ದೇಶನ/ಮನವಿಗಳು ಹಾಗೂ 13 ಸಂಸ್ಥೆಗಳ ನಾಮನಿರ್ದೇಶನ/ಮನವಿಗಳು ಇದ್ದವು.

ಸದರಿ ನಾಮನಿರ್ದೇಶನ/ಮನವಿಗಳನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ರಚಿತವಾಗಿದ್ದ ಆಯ್ಕೆ ಸಮಿತಿಯ ಮುಂದೆ ಮಂಡಿಸಲಾಗಿತ್ತು. ಈ ಸಮಿತಿಯು ದಿನಾಂಕ: 10-05-2012 ರಂದು ಸಭೆ ನಡೆಸಿ ಅರ್ಜಿಯ ವಿವರಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಕೆಳಕಂಡ ವ್ಯಕ್ತಿ/ಸಂಸ್ಥೆಗಳನ್ನು ಪ್ರಶಸ್ತಿಗೆ ಶಿಫಾರಸ್ಸು ಮಾಡಿರುತ್ತದೆ.

(i) ದಕ್ಷಿಣ ವಲಯ, ವ್ಯಕ್ತಿಗಳ ವಿಭಾಗದಿಂದ ಶ್ರೀಮತಿ ಸ್ವಾತಿ ಬೋಗ್ಲೆ, ಟೈಡ್ (TIDE), ಮಲ್ಲೇಶ್ವರಂ, ಬೆಂಗಳೂರು.

(ii) ದಕ್ಷಿಣ ವಲಯದ ಸಂಸ್ಥೆ ವಿಭಾಗದಿಂದ ಸಿದ್ದಗಂಗಾ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ತುಮಕೂರು.

(iii) ಮಲೆನಾಡು ಮತ್ತು ಕರಾವಳಿ ವಲಯದ ವ್ಯಕ್ತಿಗಳ ವಿಭಾಗದಿಂದ ಶ್ರೀ ಎಂ.ಕೆ. ಕೈಲಾಸಮೂರ್ತಿ, ಅಕಾಡೆಮಿ ಆಫ್ ನ್ಯಾಚುರಲ್ ಫಾರ್ಮಿಂಗ್, ನಂ. 10 8ನೇ ಬ್ಲಾಕ್, ಆದಿಶಕ್ತಿ ರಸ್ತೆ, ಶಕ್ತಿ ನಗರ, ಮೈಸೂರು.

(iv) ಮಲೆನಾಡು ಮತ್ತು ಕರಾವಳಿ ವಲಯದ ಸಂಸ್ಥೆ ವಿಭಾಗದಿಂದ ಕೇವಲ ಎರಡು ಸಂಸ್ಥೆಗಳ ಮನವಿ/ನಾಮನಿರ್ದೇಶನ ಸ್ವೀಕೃತವಾಗಿದ್ದು, ಇದರ ಬದಲಾಗಿ ತುಲನಾತ್ಮಕವಾಗಿ ಅತ್ಯುತ್ತಮ ಸೇವೆ ಸಲ್ಲಿಸಿರುವ ದಕ್ಷಿಣ ವಲಯ ವಿಭಾಗದ ಬೆಂಗಳೂರು ಅಂತರರಾಷ್ಟ್ರೀಯ ವಿಮಾನನಿಲ್ದಾಣ ನಿಯಮಿತವನ್ನು ಪ್ರಶಸ್ತಿಗೆ ಶಿಫಾರಸ್ಸು ಮಾಡಲಾಗಿದೆ.

(v) ಉತ್ತರ ವಲಯದ ವ್ಯಕ್ತಿ ವಿಭಾಗದಲ್ಲಿ ಸ್ವೀಕೃತವಾಗಿರುವ ಮನವಿ/ನಾಮನಿರ್ದೇಶನಗಳಿಗಿಂತ ತುಲನಾತ್ಮಕವಾಗಿ ಮಲೆನಾಡು ಮತ್ತು ಕರಾವಳಿ ವಿಭಾಗದ ಶ್ರೀ ಬಿ.ಎನ್. ಉಮೇಶ್, ಬಳ್ಳೂರು, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆಯವರು (ಮಲೆನಾಡು ವಲಯ) ಕೈಗೊಂಡಿರುವ ಕಾರ್ಯ ಉತ್ತಮವಾಗಿದೆಯೆಂದು ಅಭಿಪ್ರಾಯಪಟ್ಟ ಸಮಿತಿ ಇವರ ಹೆಸರನ್ನು ಉತ್ತರ ವಲಯ ವ್ಯಕ್ತಿ ವಿಭಾಗದ ಪರಿಸರ ಪ್ರಶಸ್ತಿಗೆ ಶಿಫಾರಸ್ಸು ಮಾಡಿದೆ.

(vi) ಉತ್ತರ ವಲಯದ ಸಂಸ್ಥೆ ವಿಭಾಗದಿಂದ ಜ್ಞಾನತರಂಗಿಣಿ ವಿದ್ಯಾ ಸಂಸ್ಥೆ ಆರ್.ಪಿ. ರಸ್ತೆ, ಜಗಳೂರು ದಾವಣಗೆರೆ ಜಿಲ್ಲೆ.

(vii) ಅಲ್ಲದೇ ಪ್ರಶಸ್ತಿ ಆಯ್ಕೆ ಸಮಿತಿಯ ಮಲೆನಾಡು ಮತ್ತು ಕರಾವಳಿ ವಿಭಾಗದಿಂದ ನಾಮ ನಿರ್ದೇಶಿತಗೊಂಡಿದ್ದ ಚಾಮರಾಜನಗರ ಜಿಲ್ಲಾಧಿಕಾರಿಯಾಗಿದ್ದ ಶ್ರೀ ಕೆ. ಅಮರನಾರಾಯಣ್ ರವರ (ಹಾಲಿ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, 5ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು) ಪರಿಸರ ಸಂರಕ್ಷಣೆ ಕಾರ್ಯದ ಬಗ್ಗೆ ಪ್ರಶಂಸೆ ವ್ಯಕ್ತಪಡಿಸಿ ಅವರು ಈ ಹಿಂದೆ ಕಾರ್ಯ ನಿರ್ವಹಿಸಿದ ಸ್ಥಳಗಳಲ್ಲಿಯೋ ಹಲವಾರು ಪರಿಸರ ಸಂರಕ್ಷಣಾ ಕಾರ್ಯಗಳನ್ನು ಕೈಗೊಂಡಿದ್ದು, ಇಂತಹ ಅಧಿಕಾರಿಗಳನ್ನು ಗುರುತಿಸಿ ಪುರಸ್ಕರಿಸುವುದು ಅಗತ್ಯವೆಂದು ಅಭಿಪ್ರಾಯಪಟ್ಟು ಇವರ ಹೆಸರನ್ನು ಪ್ರಶಸ್ತಿಯ ಬದಲಿಗೆ ವಿಶೇಷ ಪುರಸ್ಕಾರಕ್ಕೆ ಶಿಫಾರಸ್ಸು ಮಾಡಿದೆ.

ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಶಿಫಾರಸ್ಸುಗಳನ್ನು ಪರಿಗಣಿಸಿ 2011–12ನೇ ಸಾಲಿನ ರಾಜ್ಯ ಪರಿಸರ ಪ್ರಶಸ್ತಿ ಪುರಸ್ಕೃತ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಅಂತಿಮಗೊಳಿಸಲಾಗಿದೆ. ಅದರಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 3 ಇಎನ್‌ಜಿ 2012 ಬೆಂಗಳೂರು, ದಿನಾಂಕ: 01–06–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಶಿಫಾರಸ್ಸಿನಂತೆ, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಕೆಳಕಂಡ ವ್ಯಕ್ತಿ ಮತ್ತು ಸಂಸ್ಥೆಗಳನ್ನು 2011–12ನೇ ಸಾಲಿನ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ. ಸದರಿ ಪ್ರಶಸ್ತಿಯು ತಲಾ ರೂ. 1.00 ಲಕ್ಷ (ಒಂದು ಲಕ್ಷ ರೂ. ಮಾತ್ರ) ನಗದು (ವಿಶೇಷ ಪುರಸ್ಕೃತರನ್ನು ಹೊರತುಪಡಿಸಿ) ಮತ್ತು ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ.

1. ಶ್ರೀಮತಿ ಸ್ವಾತಿ ಬೋಗ್ಲೆ, ಕಾರ್ಯದರ್ಶಿ
   ಟೆಕ್ನಾಲಜಿ ಇನ್‌ಫಾರಮೆಟಿಕ್ಸ್ ಡಿಸೈನ್ ಎನ್‌ಡೋವರ್
   ನಂ. 19, 9ನೇ ಕ್ರಾಸ್, ಮಲ್ಲೇಶ್ವರಂ,
   ಬೆಂಗಳೂರು–560 003
2. ಶ್ರೀ ಎಂ.ಕೆ. ಕೈಲಾಸಮೂರ್ತಿ
   ಅಕಾಡೆಮಿ ಆಫ್ ನ್ಯಾಚುರಲ್ ಫಾರ್ಮಿಂಗ್
   ನಂ 10, 8ನೇ ಬ್ಲಾಕ್, ಆದಿಶಕ್ತಿ ರಸ್ತೆ,
   ಶಕ್ತಿನಗರ, ಮೈಸೂರು– 570 019
3. ಶ್ರೀ ಬಿ.ಎನ್. ಉಮೇಶ್
   ಬಳ್ಳೂರು, ಬೇಲೂರು ತಾಲ್ಲೂಕು
   ಹಾಸನ ಜಿಲ್ಲೆ.
4. ಶ್ರೀ ಕೆ. ಅಮರನಾರಾಯಣ್,
   ವಿಶೇಷ ಪುರಸ್ಕೃತರು
   ಸರ್ಕಾರದ ಕಾರ್ಯದರ್ಶಿಗಳು,
   ಕಂದಾಯ ಇಲಾಖೆ, 5ನೇ ಮಹಡಿ
   ಬಹುಮಹಡಿ ಕಟ್ಟಡ, ಬೆಂಗಳೂರು, –560 001

5. ಸಿದ್ದಗಂಗಾ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ
ಎ.ಎನ್.ಎಸ್. ಕನ್ಸ್ಲ್ಟೆಂಟ್ ನ> 1031, 29ನೇ ಕ್ರಾಸ್,
ಮಲ್ಲಿಗೆ ರಸ್ತೆ, ಎಸ್.ಐ.ಟಿ. ಬಡಾವಣೆ,
ತುಮಕೂರು –572103
6. ಬೆಂಗಳೂರು ಅಂತರಾಷ್ಟ್ರೀಯ ವಿಮಾನನಿಲ್ದಾಣ ನಿಯಮಿತ,
ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣ,
ಆಡಳಿತ ಕಚೇರಿ, ಪ್ರಾಜೆಕ್ಟ್ ಆಫೀಸ್ (ಇ ಅಂಡ್ ಎಂ)
ದೇವನಹಳ್ಳಿ, ಬೆಂಗಳೂರು–560 300
7. ಜ್ಞಾನತರಂಗಿಣಿ ವಿದ್ಯಾ ಸಂಸ್ಥೆ,
ಆರ್.ವಿ. ರಸ್ತೆ,
ಜಗಳೂರು,
ದಾವಣಗೆರೆ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಹೆಚ್. ಅನುಸೂಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ

ಪಿ.ಆರ್. 1560

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ತಿದ್ದುಪಡಿ

ಸಂಖ್ಯೆ: ಮಮಇ 35 ಮಭಾಬ 2012, ಬೆಂಗಳೂರು, ದಿನಾಂಕ: 15–05–2012

ಸರ್ಕಾರದ ಆದೇಶ ಸಂಖ್ಯೆ: ಮಮಇ 67 ಮಭಾಬ 2010, ದಿನಾಂಕ: 09–09–2010 ರ ಆದೇಶದ ಅನುಬಂಧದಲ್ಲಿನ ಕಂಡಿಕೆ IVರ ಆಯ್ಕೆ ಮಾಡುವ ವಿಧಾನಕ್ಕೆ ಸಂಬಂಧಿಸಿದಂತೆ ಕೆಳಕಂಡ ಅಂಶಗಳಿಗೆ ಸೂಚಿಸಿರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕ್ರಮ ಸಂಖ್ಯೆ 1 ರಲ್ಲಿ "ಅವಶ್ಯವಿರುವ ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳಲ್ಲಿ ಉದ್ಯೋಗಸ್ಥ ಮಹಿಳಾ ವಸತಿ ನಿಲಯಗಳನ್ನು ನಿರ್ಮಾಣ ಮಾಡಲು ಏಕ ರೂಪ ನೀಲಿ ನಕ್ಷೆ ಹಾಗೂ ಗೃಹ ನಿರ್ಮಾಣ ಮಾಡುವ ಮತ್ತು ನಿರ್ವಹಿಸುವ ಸ್ವಯಂ ಸೇವಾ ಸಂಸ್ಥೆಗಳು ಅಥವಾ ಇತರೆ ಸಂಸ್ಥೆಗಳನ್ನು ಗುರುತಿಸಲು ಟೆಂಡರ್ ಪ್ರಕ್ರಿಯೆಯನ್ನು ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರೊಂದಿಗೆ ಸಮಾಲೋಚಿಸಿ ಟೆಂಡರ್ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಂತೆ ಟೆಂಡರ್ ದಾಖಲೆಗಳನ್ನು ತಯಾರಿಸುವುದು ಸೇರಿದಂತೆ, ಕೈಗೊಳ್ಳಲು ಅಧಿಸೂಚನೆ ಸಂಖ್ಯೆ: ಐಡಿಡಿ 201 ಐಟಿಎಸ್ 2007, ದಿನಾಂಕ: 03–01–2009 ರಲ್ಲಿ ನಿಗದಿಪಡಿಸಿರುವ ಪೂರ್ವಾನು ಅರ್ಹತೆಯುಳ್ಳ ಪಟ್ಟಿಯಲ್ಲಿನ ಸಂಸ್ಥೆಗಳ ಮೂಲಕ ಕ್ರಮ ವಹಿಸತಕ್ಕದ್ದು" ಎನ್ನುವುದರ ಬದಲು "ಜಿಲ್ಲಾಧಿಕಾರಿಗಳು, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾಪಂಚಾಯತ್, ಸಮಾಜ ಕಲ್ಯಾಣಾಧಿಕಾರಿಗಳು, ಜಿಲ್ಲಾ ಆರೋಗ್ಯ ಅಧಿಕಾರಿಗಳು, ಆಯಾ ಜಿಲ್ಲೆಯ ಇಲಾಖಾ ಉಪನಿರ್ದೇಶಕರು ಹಾಗೂ ಒಂದು ಸ್ವಯಂ ಸೇವಾ ಸಂಸ್ಥೆಯ ಸದಸ್ಯರನ್ನೊಳಗೊಂಡಂತೆ ಟಾಸ್ಕಫೋರ್ಸ್ ಸಮಿತಿಯನ್ನು ರಚಿಸಿ, ಈ ಸಮಿತಿಯ ಮೂಲಕ ಯೋಜನೆಯನ್ನು ಅನುಷ್ಠಾನಗೊಳಿಸಿ ಉಸ್ತುವಾರಿಯನ್ನು ಇಲಾಖೆಯು ಕೈಗೊಳ್ಳುವುದು ಹಾಗೂ ಜಿಲ್ಲಾ ಮಟ್ಟದಲ್ಲಿ ಇ–ಟೆಂಡರ್ ಪ್ರಕ್ರಿಯೆ ಮೂಲಕ ಕ್ರಮ ಕೈಗೊಳ್ಳುವುದು" ಎಂದು;

ಕ್ರಮ ಸಂಖ್ಯೆ 3 ರಲ್ಲಿ "ರಾಜ್ಯ ಸರ್ಕಾರದಿಂದ ಅನುಮೋದಿಸಿದ ಉದ್ಯೋಗಸ್ಥ ಮಹಿಳೆಯರ ವಸತಿ ಗೃಹ ಕಟ್ಟಡದ ನಕ್ಷೆಯಂತೆ ಕಟ್ಟಡವನ್ನು ನಿರ್ಮಾಣ ಮಾಡಬೇಕಾಗಿರುತ್ತದೆ" ಎನ್ನುವುದರ ಬದಲು "ಇಲಾಖೆ ನೀಡುವ ವಸತಿ ಗೃಹಗಳ ಏಕರೂಪ ವಿನ್ಯಾಸ/ನಕ್ಷೆಯ ಬದಲಾಗಿ ಸಂಸ್ಥೆಯ ಇಚ್ಛೆಯಂತೆ, ವಸತಿ ನಿಲಯದ ವಿನ್ಯಾಸವನ್ನು ಹೊಂದಲು ಅವಕಾಶ ಕಲ್ಪಿಸುವುದು" ಎಂದು ಹಾಗೂ;

ಕ್ರಮ ಸಂಖ್ಯೆ 22 ರಲ್ಲಿ "ಶಾಲೆ/ ಕಾಲೇಜು ವಿದ್ಯಾರ್ಥಿನಿಯರಿಗೆ ಅವಕಾಶವಿಲ್ಲದಂತೆ ನೋಡಿಕೊಳ್ಳುವುದು" ಎನ್ನುವುದರ ಬದಲು " ವಸತಿ ನಿಲಯಗಳಲ್ಲಿ ಶಾಲೆ/ಕಾಲೇಜು ವಿದ್ಯಾರ್ಥಿನಿಯರಿಗೂ ಸಹ ಶೇ. 30 ರಷ್ಟು ವಾಸ್ತವ್ಯ ನೀಡಲು ಅವಕಾಶ ನೀಡುವುದು".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿಜಯಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 1561

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

ವಿಷಯ : ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ಹುದ್ದೆಗಳನ್ನು ಸೃಜಿಸಿ ವೃಂದ ಬಲವನ್ನು ಹೆಚ್ಚಿಸುವ ಬಗ್ಗೆ.

ಓದಲಾಗಿದೆ : 1. ಸರ್ಕಾರದ ಆದೇಶ ಸಂಖ್ಯೆ : ಅಪಜೀ 1 ಇಪಿಸಿ 2003, ದಿನಾಂಕ : 21–04–2006.

2. ಸರ್ಕಾರದ ಪತ್ರ ಸಂಖ್ಯೆ : ಅಪಜೀ 49 ಇಪಿಸಿ 2008, ದಿನಾಂಕ : 7–10–2008.

3. ಶ್ರೀ ಡಿ. ಆರ್. ಕುಮಾರಸ್ವಾಮಿ ಹಾಗೂ ಇತರರು ಸಲ್ಲಿಸಿರುವ ರಿಟ್ ಅರ್ಜಿ ಸಂಖ್ಯೆ : 13216/2008.

4. ಸರ್ಕಾರದ ಆದೇಶ ಸಂಖ್ಯೆ : ಅಪಜೀ 139 ಇಪಿಸಿ 2010, ದಿನಾಂಕ : 27–10–2010.

5. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಪತ್ರ ಸಂಖ್ಯೆ : ಮಾನಿಮ 14 ಅಡೆ 08/49 ದಿನಾಂಕ : 23–04–2012.

**ಪ್ರಸ್ತಾವನೆ :**

ಮೇಲೆ 1ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2 ಮುಖ್ಯ ಪರಿಸರ ಅಧಿಕಾರಿ ಹುದ್ದೆಗಳನ್ನು ಹಾಗೂ 5 ಹಿರಿಯ ಪರಿಸರ ಅಧಿಕಾರಿ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿದೆ. ಸದರಿ ಆದೇಶದಲ್ಲಿ ಸೃಜಿಸಲಾಗಿರುವ 5 ಹಿರಿಯ ಪರಿಸರ ಅಧಿಕಾರಿ ಹುದ್ದೆಗಳಲ್ಲಿ 2 ಹುದ್ದೆಗಳನ್ನು ಮುಖ್ಯ ಪರಿಸರ ಅಧಿಕಾರಿ ಹುದ್ದೆಗೆ ಮೇಲ್ದರ್ಜೆಗೇರಿಸಿ ಮಾರ್ಪಡಿಸಲಾಗಿದೆ ಹಾಗೂ ಮೇಲೆ ಓದಲಾದ (4)ರ ಆದೇಶದಲ್ಲಿ 3 ಹಿರಿಯ ಪರಿಸರ ಅಧಿಕಾರಿ ಹುದ್ದೆಗಳಲ್ಲಿ ಒಂದು ಹಿರಿಯ ಪರಿಸರ ಹುದ್ದೆಯನ್ನು ಮುಖ್ಯ ಪರಿಸರ ಅಧಿಕಾರಿ ಹುದ್ದೆಗೆ ಮೇಲ್ದರ್ಜೆಗೇರಿಸಲಾಗಿದೆ. ಈ ಹಂತದಲ್ಲಿ ಎರಡು ಹಿರಿಯ ಪರಿಸರ ಅಧಿಕಾರಿ ಹುದ್ದೆಗಳು ಮಾತ್ರ ಲಭ್ಯವಿರುತ್ತದೆ.

ತದನಂತರ ಮಂಡಳಿಯ ಜ್ಞಾಪನ ಪತ್ರ ದಿನಾಂಕ : 01–10–2008 ರಲ್ಲಿ 12 ಹಿರಿಯ ಪರಿಸರ ಅಧಿಕಾರಿ ಹುದ್ದೆಗಳನ್ನು ಸೃಜಿಸಿ, 13 ಪರಿಸರ ಅಧಿಕಾರಿಗಳಿಗೆ ಹಿರಿಯ ಪರಿಸರ ಅಧಿಕಾರಿ ಹುದ್ದೆಗಳಿಗೆ ಮುಂಬಡ್ತಿ ನೀಡಿ ಆದೇಶಿಸಲಾಗಿದೆ. ಆದರೆ, ಮೇಲೆ (2)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಮಂಡಳಿಯ ಹಿತದೃಷ್ಟಿಯಿಂದ ಮತ್ತು ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಶೀಲಿಸುವ ಅಗತ್ಯವಿದ್ದುದರಿಂದ ಪ್ರಸ್ತಾವನೆಯನ್ನು ಮುಂದಿನ ಆದೇಶದವರೆಗೆ ತಡೆಹಿಡಿಯುವಂತೆ ಮಂಡಳಿಗೆ ಸೂಚಿಸಲಾಗಿತ್ತು.

ಶ್ರೀ ಡಿ.ಆರ್. ಕುಮಾರ್‌ಸ್ವಾಮಿ ಮತ್ತು ಇತರರು ಸರ್ಕಾರದ ಈ ಸೂಚನೆಯನ್ನು ಮೇಲೆ 3 ರಲ್ಲಿ ಓದಲಾದ ರಿಟ್ ಅರ್ಜಿಯ ಮೂಲಕ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದರು. ಈ ಅರ್ಜಿಯ ಮೇಲೆ ಘನ ನ್ಯಾಯಾಲಯವು ದಿನಾಂಕ : 22–10–2008 ರಂದು ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ.

'while it is open for the respondents to pursue the examination of the legality of the promotions of the petitioners, the direction to stay the order of promotion is hereby stayed'

ಈ ವಿಷಯದ ಬಗ್ಗೆ ಸಂಪೂರ್ಣ ಪಾರದರ್ಶಕತೆಯನ್ನು ಖಾತ್ರಿಪಡಿಸಿಕೊಳ್ಳುವುದಕ್ಕಾಗಿ ಸರ್ಕಾರವು ಅಧಿಸೂಚನೆ ಸಂಖ್ಯೆ : ಅಪಜೀ 1 ಇಪಿಸಿ 2003, ದಿನಾಂಕ : 22–11–2008 ರ ಆದೇಶದಲ್ಲಿ ಮಂಡಳಿಯ ವತಿಯಿಂದ ಹುದ್ದೆಗಳನ್ನು ಸೃಜಿಸುವ ಮೊದಲು ಸರ್ಕಾರದ ಪೂರ್ವಾನುಮತಿ ಪಡೆಯುವಂತೆ ಆದೇಶಿಸಿದೆ.

ಮೇಲೆ ಓದಲಾದ (5)ರ ಮಂಡಳಿಯ ಪತ್ರದಲ್ಲಿ ದಿನಾಂಕ : 13–11–2007 ರಂದು ನಡೆದ 168 ನೇ ಮಂಡಳಿಯ ಸಭೆಯ ನಿರ್ಣಯದಂತೆ ಮಂಡಳಿಗೆ ಪ್ರದತ್ತವಾದ ಅಧಿಕಾರದನ್ವಯ ಹಿರಿಯ ಪರಿಸರ ಅಧಿಕಾರಿಗಳ ಮುಂಬಡ್ತಿಯನ್ನು ಮಾಲಿನ್ಯ ನಿಯಂತ್ರಣಕ್ಕೆ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರ ನಿಡುತ್ತಿರುವ ನಿರ್ದೇಶನಗಳನ್ನು ಜಾರಿ ಮಾಡಲು, ಘನತ್ಯಾಜ್ಯ ವಸ್ತುಗಳ ವಿಲೇವಾರಿ, ಆಸ್ಪತ್ರೆ ತ್ಯಾಜ್ಯಗಳು, ಇ–ತ್ಯಾಜ್ಯ ವಿಲೇವಾರಿ, ಕೆರೆಗಳ ಜಲ ಮಾಲಿನ್ಯ ವಿಷಯಗಳಲ್ಲಿ ಉಚ್ಚ ನ್ಯಾಯಾಲಯವು ಹಾಗೂ ಲೋಕ್ ಅದಾಲತ್‌ನಿಂದ ಸ್ವೀಕೃತವಾದ ನಿರ್ದೇಶನಗಳನ್ನು ಅನುಷ್ಠಾನಗೊಳಿಸುವ ಸಲುವಾಗಿ ಈ ವಿಷಯಗಳಲ್ಲಿ ಅನುಭವ, ಪರಿಣಿತಿ ಪಡೆದಿರುವ ಹಿರಿಯ ಪರಿಸರ ಅಧಿಕಾರಿ ಹುದ್ದೆಗಳ ಅವಶ್ಯಕತೆ ಇರುವುದನ್ನು ಪರಿಗಣಿಸಿ 12 ಹಿರಿಯ ಪರಿಸರ ಅಧಿಕಾರಿ ಹುದ್ದೆಗಳ ಸೃಜನೆಗೆ ಅನುಮೋದನೆ ನಿಡುವಂತೆ ಮತ್ತೊಮ್ಮೆ ಕೋರಿದೆ.

ಸದರಿ ಪ್ರಸ್ತಾವನೆಯನ್ನು ನಿಯಮಾನುಸಾರ ಕೂಲಂಕಷವಾಗಿ ಪರಿಶೀಲಿಸಿ ಮತ್ತು ಮಂಡಳಿಯ ಕಾರ್ಯವ್ಯಾಪ್ತಿ ಮತ್ತು ಕಾರ್ಯ ಒತ್ತಡವನ್ನು ಪರಿಗಣಿಸಿ ಸದರಿ ಹೆಚ್ಚುವರಿ ಹುದೆಗಳ ಸೃಜನೆಗೆ ಸರ್ಕಾರವು ಸಮ್ಮತಿಸಿದ್ದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 130 ಇಪಿಸಿ 2010 ಬೆಂಗಳೂರು, ದಿನಾಂಕ : 04 ನೇ ಜೂನ್ 2012**

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಕಾರ್ಯಕಲಾಪಗಳನ್ನು ಸುಗಮವಾಗಿ ನಿರ್ವಹಿಸುವ ಆಡಳಿತಾತ್ಮಕ ಹಿತದೃಷ್ಟಿಯಿಂದ ಈ ಹಿಂದೆ ಸೃಜಿಸಲಾದ 2 ಹಿರಿಯ ಪರಿಸರ ಅಧಿಕಾರಿ ಹುದ್ದೆಗಳೊಂದಿಗೆ ಹೆಚ್ಚುವರಿಯಾಗಿ 12 ಹಿರಿಯ ಪರಿಸರ ಅಧಿಕಾರಿ ಹುದ್ದೆಗಳನ್ನು ಸೃಜಿಸಿ ಹಿರಿಯ ಪರಿಸರ ಅಧಿಕಾರಿಗಳ ವೃಂದಬಲವನ್ನು ಒಟ್ಟು 14 ಹಿರಿಯ ಪರಿಸರ ಅಧಿಕಾರಿ ಹುದ್ದೆಗಳಿಗೆ ಏರಿಸಲು ಸರ್ಕಾರದ ಆದೇಶ ಸಂಖ್ಯೆ : ಅಪಜೀ 7 ಇಪಿಸಿ 2010, ದಿನಾಂಕ : 30–09–2010 ರ ಅನುಸಾರ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ.

ಹೆಚ್ಚುವರಿಯಾಗಿ ಸೃಜಿಸಲಾಗಿರುವ ಸದರಿ ಹುದ್ದೆಗಳಿಂದ ಉಂಟಾಗುವ ವೃಂದ ಬಲವನ್ನು ಸರಿಪಡಿಸಿಕೊಳ್ಳುವ ಹಿನ್ನೆಲೆಯಲ್ಲಿ ಮಂಡಳಿಯು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ನಿಯಮಾನುಸಾರ ತಿದ್ದುಪಡಿ ಆದೇಶವನ್ನು ಹೊರಡಿಸತಕ್ಕದ್ದು.

ಸದರಿ ಹುದ್ದೆಗಳ ಸೃಜನೆಯಿಂದ ಉಂಟಾಗುವ ವೆಚ್ಚವನ್ನು ಮಂಡಳಿಯ ಸ್ವಂತ ಅನುದಾನದಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1606

**ಜಿ.ಹೆಚ್. ಅನಸೂಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

(ಪರಿಸರ ಮತ್ತು ಜೀವಿಶಾಸ್ತ್ರ)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಆರ್ಥಿಕ ಸಚಿವಾಲಯ

**ಸುತ್ತೋಲೆ**

**ಸಂಖ್ಯೆ : ಆಇ 2 ಸೇನಿಸೇ 2012 ಬೆಂಗಳೂರು, ದಿನಾಂಕ : 24 ನೇ ಮೇ 2012**

ವಿಷಯ : ಹೊಸ ವ್ಯಾಖ್ಯಾನಿಸಿದ ಅಂಶದಾಯಿ ಕೊಡುಗೆ ಯೋಜನೆಯ ವ್ಯಾಪ್ತಿಗೆ ಬರುವ ಸರ್ಕಾರಿ ನೌಕರರು ಸೇವೆಯಲ್ಲಿರುವಾಗಲೇ ಮೃತರಾದ ಸಂದರ್ಭದಲ್ಲಿ ಅವರ ಕುಟುಂಬಗಳಿಗೆ ನೀಡಬಹುದಾದ ಇಡಿಗಂಟಿನ ಪರಿಹಾರ ನೀಡುವ ಬಗ್ಗೆ.

ಉಲೇಖ : 1. ಸರ್ಕಾರಿ ಆದೇಶ ಸಂಖ್ಯೆ : ಆಇ 3 ಸೇನಿಸೇ 2010 ದಿನಾಂಕ : 12-10-2010 ಮತ್ತು 15-04-2011.

2. ಖಜಾನೆ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಖನಿ/ಎನ್.ಪಿ.ಎಸ್/04/10-11, ದಿನಾಂಕ : 20-09-2011.

ಮೇಲಿನ ಉಲ್ಲೇಖ (1)ರಲ್ಲಿನ ದಿನಾಂಕ : 12-10-2010ರ ಆದೇಶದಲ್ಲಿ ಈ ಯೋಜನೆಯ ವ್ಯಾಪ್ತಿಗೆ ಒಳಪಟ್ಟಿದ್ದು, ವಯೋ ನಿವೃತ್ತಿ ಮುನ್ನವೇ ಸೇವೆಯಲ್ಲಿದ್ದಾಗ ಮೃತ ಹೊಂದುವ ಸರ್ಕಾರಿ ನೌಕರರ ಪ್ರಕರಣಗಳಲ್ಲಿ ಅವರ ಕುಟುಂಬದವರ ಸಂಕಷ್ಟವನ್ನು ನಿವಾರಿಸುವ ಉದ್ದೇಶದಿಂದ ಅಂತಹ ಮೃತ ನೌಕರರ ಕುಟುಂಬದವರಿಗೆ ಪರಿಹಾರ ನೀಡುವ ಯೋಜನೆಯೊಂದನ್ನು ರೂಪಿಸಿರುವುದಾಗಿದೆ. ಇದನ್ನು ಮುಂದುವರೆಸಿ ದಿನಾಂಕ : 15-04-2011 ರ ಆದೇಶದಲ್ಲಿ ಈ ಯೋಜನೆಯಡಿಯಲ್ಲಿ ಪರಿಹಾರವನ್ನು ಮಂಜೂರು ಮಾಡುವ ಹಾಗೂ ಅಧೀಕರಿಸಲು ಅನುಸರಿಸಬೇಕಾದ ವಿಧಿವಿಧಾನಗಳ ಕುರಿತು ತಿಳಿಸಿರುವುದಾಗಿದೆ.

ಉಲ್ಲೇಖ (2) ರಲ್ಲಿನ ಖಜಾನೆ ನಿರ್ದೇಶಕರ ಪತ್ರದಲ್ಲಿ ಪರಿಹಾರಧನವನ್ನು ನಮೂನೆ-ಬಿ ರಲ್ಲಿ ಅಧೀಕರಿಸಿದ ತರುವಾಯದಲ್ಲಿ, ಇಲಾಖೆಗಳು ನಮೂನೆ-ಬಿ ಯನ್ನು ಇತರೆ ದಾಖಲೆಗಳೊಂದಿಗೆ ಮೊಬಲಗನ್ನು ಪಾವತಿಸುವ ಸಲುವಾಗಿ ನೇರವಾಗಿ ನಿರ್ದೇಶನಾಲಯಕ್ಕೆ ಸಲ್ಲಿಸುತ್ತಿರುವ ಅಂಶಗಳನ್ನು ಸರ್ಕಾರದ ಗಮನಕ್ಕೆ ತಂದಿರುತ್ತಾರೆ.

ಯಾವುದೇ ಮೊತ್ತವನ್ನು ಖಜಾನೆಯ ಮೂಲಕ ಸೆಳೆದು ಪಾವತಿ ಮಾಡುವ ಪೂರ್ವದಲ್ಲಿ ಇದಕ್ಕೆ ಸಂಬಂಧಿಸಿದಂತೆ ಸದರಿ ಮೊಬಲಗನ್ನು ಒಂದು ಕಾರ್ಯಕಾರಿ ಆದೇಶದ ಮೂಲಕ ಮಂಜೂರು ಮಾಡತಕ್ಕದಾಗಿದ್ದು, ಈ ಆದೇಶದ ಆಧಾರದ ಮೇರೆಗೆ ಬಿಲ್ಲನ್ನು ತಯಾರಿಸಿ ಸಂಬಂಧಪಟ್ಟ ಖಜಾನೆಗೆ ಸಲ್ಲಿಸಿದಲ್ಲಿ ಮಾತ್ರ ಸದರಿ ಮೊತ್ತವನ್ನು ಚೆಕ್ ಮೂಲಕ ಪಾವತಿಸುವಲ್ಲಿ ಸಂಬಂಧಪಟ್ಟ ಖಜಾನೆಯು ಕ್ರಮಕೈಗೊಳ್ಳುವುದಾಗಿದೆ. ಈ ವಿಧಾನವು ಸಾಮಾನ್ಯವಾಗಿ ಖಜಾನೆಯಿಂದ ಹಣ ಸೆಳೆಯುವ ಎಲ್ಲಾ ಪ್ರಕರಣಗಳಿಗೆ ಅನ್ವಯವಾಗತಕ್ಕದ್ದು. ಈ ಹಿನ್ನೆಲೆಯಲ್ಲಿ ದಿನಾಂಕ : 15-04-2011 ರ ಆದೇಶದಲ್ಲಿ ಸೂಚಿಸಿರುವ ವಿಧಿವಿಧಾನಗಳನ್ನು ಮುಂದುವರೆಸಿದಂತೆ, ನಿಗದಿತ ನಮೂನೆ-ಬಿರಲ್ಲಿ ಸಕ್ಷಮ ಪ್ರಾಧಿಕಾರವು ಪರಿಹಾರವನ್ನು ಮಂಜೂರು ಮಾಡಿ ಪರಿಹಾರವನ್ನು ಅಧೀಕರಿಸಿದ ತರುವಾಯದಲ್ಲಿ ಸದರಿ ಮೊಬಲಗನ್ನು ಒಂದು ಕಾರ್ಯಕಾರಿ ಆದೇಶದ ಮೂಲಕ ಮಂಜೂರು ಮಾಡತಕ್ಕದ್ದು ಮತ್ತು ಈ ಆದೇಶದ ಆಧಾರದ ಮೇರೆಗೆ ಬಿಲ್ಲನ್ನು ತಯಾರಿಸಿ ಸಂಬಂಧಪಟ್ಟ ಖಜಾನೆಗೆ ಸಲ್ಲಿಸಿ, ಸದರಿ ಮೊತ್ತವನ್ನು ಚೆಕ್ ಮೂಲಕ ಖಜಾನೆಯಿಂದ ಸೆಳೆದು ಮೃತರ ಕುಟುಂಬದ ಅರ್ಹ ವಾರಸುದಾರರಿಗೆ ಪಾವತಿಸುವಲ್ಲಿ ಕ್ರಮವಹಿಸತಕ್ಕದಾಗುತ್ತದೆ ಎಂದು ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1607

**ಆಲಿಸ್ ಗೊನ್ಸಾಲ್ವಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಕೆ.ಪಿ. ಚಂದ್ರಹಾಸ, ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ :** ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಟಿಪ್ಪಣಿ ಸಂಖ್ಯೆ ಎಫ್‌ಇಇ 112 ಎಸಿಎಸ್ 2012, ದಿನಾಂಕ: 02-06-2012.

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಕೆ.ಪಿ. ಚಂದ್ರಹಾಸ ಇವರು ಕಡತ ಸಂಖ್ಯೆ: ಎಫ್‌ಇಇ 192 ಎಫ್ಎಲ್ಎಲ್ 2008ರಲ್ಲಿ ಸಚಿವ ಸಂಪುಟವು ಕೈಗೊಂಡ ನಿರ್ಣಯದ ಟಿಪ್ಪಣಿ ಸಂಖ್ಯೆ: ಸಿ-209/2012ರ ಮೇಲೆ ಸರ್ಕಾರದ ಆದೇಶ ಹೊರಡಿಸುವ ಮುನ್ನ ಇಲಾಖಾ ಕಾರ್ಯದರ್ಶಿ ಅಥವಾ ಅಪರ ಮುಖ್ಯ ಕಾರ್ಯದರ್ಶಿಯರ ಅನುಮೋದನೆಯನ್ನು ಪಡೆಯದೆ ಸದರಿ ಸಚಿವ ಸಂಪುಟದ ಟಿಪ್ಪಣಿಯನ್ನು ಮಾಹಿತಿ ಹಕ್ಕು ಕಾಯಿದೆಯಡಿ ಖಾಸಗಿ ಸಂಸ್ಥೆಯೊಂದಕ್ಕೆ ನೀಡಿರುತ್ತಾರೆ. ಇದರಿಂದಾಗಿ ಸದರಿ ಖಾಸಗಿ ಸಂಸ್ಥೆಯು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಚಿವ ಸಂಪುಟದ ತೀರ್ಮಾನಕ್ಕೆ ಮಧ್ಯಂತರ ತಡೆಯಾಜ್ಞೆಯನ್ನು ತಂದಿರುತ್ತದೆ. ಈ ರೀತಿ ಶ್ರೀ ಕೆ.ಪಿ. ಚಂದ್ರಹಾಸ, ಅಧೀನ ಕಾರ್ಯದರ್ಶಿ ಇವರು ಗುರುತರವಾದ ಆರೋಪ/ಕರ್ತವ್ಯಚ್ಯುತಿ ಎಸಗಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿರಿಸಿ ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸುವಂತೆ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಸೇಇವಿ 2012, ಬೆಂಗಳೂರು, ದಿನಾಂಕ : 06–06–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಪಿ. ಚಂದ್ರಹಾಸ ಸರ್ಕಾರದ ಅಧೀನ ಕಾರ್ಯದರ್ಶಿ, , ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರು ಮಾಹಿತಿ ಹಕ್ಕು ಕಾಯಿದೆಯನ್ನು ಸರಿಯಾಗಿ ಅರ್ಥೈಸಿಕೊಳ್ಳದೆ, ಸಚಿವ ಸಂಪುಟವು ಕೈಗೊಂಡ ನಿರ್ಣಯವು ಜಾರಿಯಾಗುವ ಮುನ್ನವೇ ಖಾಸಗಿ ಸಂಸ್ಥೆಗೆ ಸಚಿವ ಸಂಪುಟ ಕೈಗೊಂಡ ನಿರ್ಣಯದ ಪ್ರತಿಯನ್ನು ಒದಗಿಸಿ ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ, ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರಡಿ ಶ್ರೀ ಕೆ.ಪಿ. ಚಂದ್ರಹಾಸ ಸರ್ಕಾರದ ಅಧೀನ ಕಾರ್ಯದರ್ಶಿ, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ಪಿ. ಚಂದ್ರಹಾಸ ಸರ್ಕಾರದ ಅಧೀನ ಕಾರ್ಯದರ್ಶಿ, ಅವರು ಕೆ.ಸಿ.ಎಸ್.ಆರ್ಸ್ ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ಪಿ. ಚಂದ್ರಹಾಸ ಸರ್ಕಾರದ ಅಧೀನ ಕಾರ್ಯದರ್ಶಿ, ಅವರು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ಲಕ್ಷ್ಮೀ ನಾರಾಯಣ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ.(ಸೇವೆಗಳು–3)

ಪಿ.ಆರ್. 1608

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಲೆಕ್ಕಪತ್ರ ಕಾರ್ಯ ನಿರ್ವಹಿಸಲು ಸಿಆಸುಇ (ಆಸು–ನಾಗರೀಕ ಸೇವೆಗಳು) ವಿಭಾಗಕ್ಕೆ ಒಂದು ಲೆಕ್ಕಪತ್ರ ಅಧೀಕ್ಷಕರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 20 ಇಕಾಅ 2012, ದಿನಾಂಕ: 06/03/2012.
2. ಅ.ಸ.ಪತ್ರ ಸಂಖ್ಯೆ: ಸಿಆಸುಇ 114 ಇಕಾಅ 2012, ದಿನಾಂಕ: 30/04/2012.
3. ಅ.ಟಿ. ಆಇ 459 ವೆಚ್ಚ–12/2012, ದಿನಾಂಕ: 16/05/2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ನ್ನು ಅನುಷ್ಠಾನಗೊಳಿಸಲು ಮಿಷನ್ ಮೋಡ್‌ನಲ್ಲಿ ಸಕಾಲ ಮಂಡಳಿಯನ್ನು ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅ.ಸ. ಪತ್ರದಲ್ಲಿ ಸಕಾಲ ಮಂಡಳಿಗೆ ಅಪರ ಮಿಷನ್ ನಿರ್ದೇಶಕರ ಹುದ್ದೆಗೆ ಶ್ರೀ ಮುನೀಶ್ ಮೌದ್ಗಿಲ್, ಭಾ.ಆ.ಸೇ. ರವರನ್ನು ಶ್ರೀ ಎಸ್. ಸುಬ್ರಮಣ್ಯನ್ ರವರನ್ನು ನಿರ್ವಹಣಾ ಸಮಾಲೋಚಕರನ್ನಾಗಿ ಹಾಗೂ ಶ್ರೀ ಜಿ. ಚಂದ್ರಶೇಖರ್ ರವರನ್ನು ಮಾಹಿತಿ ತಂತ್ರಜ್ಞಾನ ಸಮಾಲೋಚಕರನ್ನಾಗಿ ಹಾಗೂ ಶ್ರೀ ವರಪ್ರಸಾದ ರೆಡ್ಡಿ, ತಹಸೀಲ್ದಾರ್, ಚನ್ನರಾಯಪಟ್ಟಣ ಇವರನ್ನು ಸಕಾಲ ಮಂಡಳಿಯ ಆಡಳಿತಾಧಿಕಾರಿ ಹುದ್ದೆಗೆ ನೇಮಕ ಮಾಡಲಾಗಿರುತ್ತದೆ. ಮತ್ತು ಜಂಟಿ ಮಿಷನ್ ನಿರ್ದೇಶಕರ ಹುದ್ದೆ ಹಾಗೂ ನಾಲ್ಕು ಮಂದಿ ಡಾಟಾ ಎಂಟ್ರಿ ಆಪರೇಟರ್‌ಗಳ ನೇಮಕಾತಿ ಬಾಕಿ ಇದ್ದು ಅವರನ್ನು ನೇಮಕಾತಿ ಮಾಡಿಕೊಳ್ಳಲು ಉದ್ದೇಶಿಸಲಾಗಿದೆ.

ಆದ್ದರಿಂದ ಮೇಲಿನ ಅಧಿಕಾರಿಗಳಿಗೆ ವೇತನ ಬಟವಾಡೆ, ಸಕಾಲ ಮಂಡಳಿಯ ದೈನಂದಿನ ಲೆಕ್ಕಪತ್ರ ನಿರ್ವಹಣೆ, ಅನುದಾನದ ಬಳಕೆ, ಖಜಾನೆಯೊಂದಿಗೆ ವ್ಯವಹರಿಸಿ ಲೆಕ್ಕಪತ್ರಗಳ ನಿರ್ವಹಣೆ, ಮಹಾಲೇಖಪಾಲರ ಲೆಕ್ಕಪತ್ರದೊಂದಿಗೆ ತಾಳೆ ಮಾಡುವುದು ಮುಂತಾದವುಗಳ ಬಗ್ಗೆ ಕಾರ್ಯನಿರ್ವಹಿಸಲು ಒಬ್ಬ ನುರಿತ ಲೆಕ್ಕಪತ್ರ ಅಧೀಕ್ಷಕರ ಸೇವೆಯು ಅಗತ್ಯವಾಗಿದ್ದು, ಸಿಆಸುಇ (ಆಸು– ನಾಗರೀಕ ಸೇವೆಗಳು) ವಿಭಾಗದಲ್ಲಿ ಒಂದು ಲೆಕ್ಕಪತ್ರ ಅಧೀಕ್ಷಕರ ಹುದ್ದೆಯನ್ನು ಸೃಜನೆ ಮಾಡಲು ಹಾಗೂ ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡಿಕೊಳ್ಳಲು ಆರ್ಥಿಕ ಇಲಾಖೆಯನ್ನು ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಟಿಪ್ಪಣಿಯಲ್ಲಿ ಸಹಮತಿ ನೀಡಿರುವ ಮೇರಗೆ ಈ ಕೇಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 114 ಇಕಾಅ 2012, ಬೆಂಗಳೂರು, ದಿನಾಂಕ : 01–06–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಅನುಷ್ಠಾನಕ್ಕಾಗಿ ಸ್ಥಾಪಿಸಿರುವ ಸಕಾಲ ವಿಷಯ ನಿರ್ವಹಿಸುವ ಕಛೇರಿಯ ಲೆಕ್ಕಪತ್ರ ಕಾರ್ಯಗಳ ನಿರ್ವಹಣೆಗಾಗಿ ಸಿಆಸುಇ (ಆಸು–ನಾಗರೀಕ ಸೇವೆಗಳು) ವಿಭಾಗಕ್ಕೆ ಒಂದು ಲೆಕ್ಕಪತ್ರ ಅಧೀಕ್ಷಕರರು ಹುದ್ದೆಯನ್ನು ಸೃಜಿಸಲು ಹಾಗೂ ಈ ಹುದ್ದೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 459 ವೆಚ್ಚ 12/2012, ದಿನಾಂಕ: 16/05/2012 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ. ಗೀತಾ.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ)

ಪಿ.ಆರ್. 1609 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(ಆಡಳಿತ ಸುಧಾರಣೆ– ನಾಗರೀಕ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಅಧೀನದಲ್ಲಿ ಎಂ.ಪಿ.ಎಲ್.ಎ.ಡಿ.ಎಸ್. ವಿಭಾಗ ಸೃಜಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ, ಇವರ ಕಡತ ಸಂಖ್ಯೆ: ಪಿಡಿ 34 ಯೋಗಸೇ 2011; ದಿನಾಂಕ: 25–02–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕಡತದಲ್ಲಿ ಮಾನ್ಯ ಲೋಕ ಸಭಾ ಮತ್ತು ರಾಜ್ಯ ಸಭಾ ಸದಸ್ಯರುಗಳಿಗೆ ಕೇಂದ್ರ ಸರ್ಕಾರವು ಅವರವರ ಕ್ಷೇತ್ರಗಳ ಅಭಿವೃದ್ಧಿಗಾಗಿ ಪ್ರತಿ ಸದಸ್ಯರಿಗೆ ವಾರ್ಷಿಕ ರೂ. ಐದು ಕೋಟಿಗಳ ಅನುದಾನ ನೀಡುತ್ತಿದ್ದು, ಇದರಿಂದ ರಾಜ್ಯಕ್ಕೆ ವಾರ್ಷಿಕ ರೂ. 205 ಕೋಟಿ ಅನುದಾನ ಬರುತ್ತಿದೆ. ಈ ಅನುದಾನದ ಸಮರ್ಪಕ ನಿರ್ವಹಣೆಗಾಗಿ ಒಬ್ಬ ಜಂಟಿ/ ಅಪರ/ ವಿಶೇಷ ಕಾರ್ಯದರ್ಶಿ ನೇತೃತ್ವದ ಒಂದು ವಿಭಾಗವನ್ನು ರಚಿಸುವಂತೆ ಕೇಂದ್ರ ಸರ್ಕಾರದ ಸಾಂಖ್ಯಿಕ ಮತ್ತು ಕಾರ್ಯಕ್ರಮ ಜಾರಿ ಸಚಿವಾಲಯದ ಅಪರ ಕಾರ್ಯದರ್ಶಿಯವರು ಸೂಚಿಸಿದ್ದು, ಅದರಂತೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರು ಕೋರಿರುತ್ತಾರೆ.

| SI No | Name of the post | No. of Post. |
|---|---|---|
| A-Administrative post (from State Government Funds) | | |
| 1 | Special Secretary to Government | |
| 2 | Gazetted P.A. | |
| 3 | Senior Stenographer | |
| 4 | Junior Assistant | |
| 5 | Driver | |
| 6 | Dalayat | |
| 7 | Transport (vehicle) | |
| 8 | Travel Expenses | |
| 9 | Office Expenses | |
| B-Technical posts )to be outsourced/appointed on contract basis from the funds provided by (GOI) | | |
| 10 | Rtd. Deputy Directors | |
| 11 | Rtd. Asst. Ex. Engineers | |
| 12 | Rtd. Accounts Officer | |
| 13 | Computer Operator (with Degree) | |
| 14 | Assistants | |
| 15 | Dalayat | |
| 16 | Transport (outsourcing vehicle) | |
| 17 | Travel Expenses | |
| 18 | Office Expenses | |

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 140 ಸಅಸೇ 2012 ಬೆಂಗಳೂರು, ದಿನಾಂಕ: 02–06–2012.**

ಲೋಕ ಸಭಾ ಮತ್ತು ರಾಜ್ಯ ಸಭಾ ಸದಸ್ಯರುಗಳ ಕ್ಷೇತ್ರ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರವು ಒದಗಿಸುವ ಅನುದಾನದ ಸಮರ್ಪಕ ನಿರ್ವಹಣೆಗಾಗಿ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಅಧೀನದಲ್ಲಿ ಎಂ.ಪಿ.ಎಲ್.ಎ.ಡಿ.ಎಸ್. ವಿಭಾಗವನ್ನು ಈ ಕೆಳಕಂಡ ಅಧಿಕಾರಿ/ಸಿಬ್ಬಂದಿಗಳೊಂದಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ |
|---|---|---|
| 1 | ಅಧಿಕಾರಿ (ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ/ಉಪಕಾರ್ಯದರ್ಶಿ | 1 |
| 2 | ಪತ್ರಾಂಕಿತ ಆಪ್ತ ಸಹಾಯಕರು (ಪರಿಷ್ಕೃತ ವೇತನ ಶ್ರೇಣಿ 22800–43200 | 1 |
| 3 | ಹಿರಿಯ ಶೀಘ್ರಲಿಪಿಗಾರ (ಪರಿಷ್ಕೃತ ವೇತನ ಶ್ರೇಣಿ 20000–36300) | 1 |
| 4 | ಕಿರಿಯ ಸಹಾಯಕ (ಪರಿಷ್ಕೃತ ವೇತನ ಶ್ರೇಣಿ 11600–21000) | 1 |
| | ಒಟ್ಟು | 4 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 306 ವೆಚ್ಚ–12/2012 ದಿ: 27–04–2012ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಲಕ್ಷ್ಮೀ ನಾರಾಯಣ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

ಸೇವೆಗಳು–3

ಪಿ.ಆರ್. 1610

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಕಲಂ 9 ರನ್ವಯ ಟೆಂಡರ್ ಕರೆಯುವ ಪ್ರಾಧಿಕಾರ ಮತ್ತು ಟೆಂಡರ್ ಒಪ್ಪಿಗೆ ನೀಡುವ ಪ್ರಾಧಿಕಾರದ ನಿಯುಕ್ತಿ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕೆ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 20 ಇಕಾಅ 2012 ದಿನಾಂಕ: 6–3–2012 ರ ಪ್ರಕಾರ "ಸಕಾಲ ಮಿಷನ್" ಅನ್ನು ಸಿಆಸುಇ (ಆಸು) ಯ ಅಂಗವಾಗಿ ರಚಿಸಲಾಗಿದೆ.

ಸಕಾಲ ಮಿಷನ್ ಅನ್ನು ಒಂದು ಅಭಿಯಾನ ಮೂಲಕ ಸಕಾಲ ಸೇವೆಗಳ ಖಾತರಿ ಅಧಿನಿಯಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕೆ ಎಲ್ಲಾ ಬೇಕಾಗಿರತಕ್ಕ ಕ್ರಮವನ್ನು ಸಮಯಬದ್ಧವಾಗಿ ತೆಗೆದುಕೊಳ್ಳುವ ಅವಶ್ಯಕತೆ ಇರುತ್ತದೆ. ಈ ಸಂದರ್ಭದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಕಲಂ 9 ರನ್ವಯ ಸಕಾಲ ಮಿಷನ್ ಎಲ್ಲಾ ಟೆಂಡರ್ ಗಳನ್ನು ಕರೆಯುವ ಸಲುವಾಗಿ " ಟೆಂಡರ್ ಅಂಗೀಕಾರ ಪ್ರಾಧಿಕಾರ" ಮತ್ತು "ಟೆಂಡರ್ ಕರೆಯುವ ಪ್ರಾಧಿಕಾರ" ನೇಮಕಾತಿ ಆದೇಶ ಹೊರಡಿಸಬೇಕಾಗಿರುತ್ತದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 136 ಇಕಾಅ 2012 ಬೆಂಗಳೂರು, ದಿನಾಂಕ: 25–05–2012.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 (ಕರ್ನಾಟಕದ 2000ರ 29ನೇ ಅಧಿನಿಯಮ) ರಲ್ಲಿನ ಕಲಂ 9 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಯಿಂದ ಈ ಕೆಳಕಂಡ ಅಧಿಕಾರಿಗಳನ್ನು "ಸಕಾಲ ಮಂಡಳಿಯ" ಎಲ್ಲಾ ಟೆಂಡರ್ ಮತ್ತು ಸಂಗ್ರಹಣೆಗಳ ಸಲುವಾಗಿ ನೇಮಿಸಲಾಗಿದೆ.

| | |
|---|---|
| 1) ಟೆಂಡರ್ ಅಂಗೀಕಾರ ಪ್ರಾಧಿಕಾರ | ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಿಆಸುಇ(ಆಸು) ಮತ್ತು ಮಂಡಳಿ ನಿರ್ದೇಶಕರು, ಸಕಾಲ ಮಂಡಳಿ |
| 2) ಟೆಂಡರ್ ಕರೆಯುವ ಪ್ರಾಧಿಕಾರ | ಆಡಳಿತಾಧಿಕಾರಿ, ಸಕಾಲ ಮಂಡಳಿ, ಸಿಆಸುಇ (ಆಡಳಿತ ಸುಧಾರಣೆ) |

ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27–4–2012ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ. ಗೀತಾ. ಎಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಆಸು–ನಾಗರೀಕ ಸೇವೆಗಳು)

ಪಿ.ಆರ್. 1611

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೇವೆಗಳನ್ನು ಒದಗಿಸುತ್ತಿರುವ ಇಲಾಖೆಗಳಲ್ಲಿ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ :** 1. ಆರ್ಥಿಕ ಇಲಾಖೆಯು ನೀಡಿರುವ ಕ್ರಮಾಂಕ ಆಇ 310 ವೆಚ್ಚ-12/2012 ದಿನಾಂಕ: 10-05-2012ರ ಸಹಮತಿ

**2.** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಈಸಪ 2011, ದಿನಾಂಕ: 15/05/2012. ಮತ್ತು ತಿದ್ದುಪಡಿ ದಿನಾಂಕ: 15/05/2012.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೇವೆಗಳನ್ನು ಒದಗಿಸುತ್ತಿರುವ ಇಲಾಖೆಗಳಲ್ಲಿ ಡಾಟಾ ಎಂಟ್ರಿ ಅಪರೇಟರುಗಳನ್ನು ಹಾಗೂ ಇನ್ನಿತರ ಅವಶ್ಯಕವಾದ ಹುದ್ದೆಗಳನ್ನು ಭರ್ತಿ ಮಾಡುವ ಹಾಗೂ ತಕ್ಷಣ 6 ತಿಂಗಳ ಅವಧಿಗೆ ನಿವೃತ್ತ ಅಧಿಕಾರಿಗಳನ್ನು ನೇಮಿಸಿಕೊಳ್ಳುವ ಬಗ್ಗೆ ಆರ್ಥಿಕ ಇಲಾಖೆಯು ಮೇಲೆ (1) ರಲ್ಲಿ ನೀಡಿರುವ ಸಹಮತಿಯನ್ವಯ ಮೇಲೆ (2) ಹೇಳಿರುವ ಆದೇಶವನ್ನು ಹೊರಡಿಸಲಾಗಿದೆ.

ನಂತರದಲ್ಲಿ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೇವೆಗಳನ್ನು ಒದಗಿಸಲು ಇಲಾಖೆಗಳು ಕೋರಿರುವಂತೆ ಡಾಟಾ ಎಂಟ್ರಿ ಅಪರೇಟರುಗಳು ಹಾಗೂ ಇನ್ನಿತರ ಅವಶ್ಯವಾದ ಸಿಬ್ಬಂದಿಯನ್ನು ಭರ್ತಿ ಮಾಡುವ ಬಗ್ಗೆ ಪ್ರಸ್ತಾವನೆಯನ್ನು ಸಚಿವಸಂಪುಟದ ಅನುಮೋದನೆಗೆ ಮಂಡಿಸಲಾಗಿತ್ತು. ದಿನಾಂಕ 26-05-2012ರಂದು ನಡೆದ ಸಚಿವಸಂಪುಟದ ಸಭೆಯಲ್ಲಿ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ ಹಾಗೂ ಅವಶ್ಯವಾಗಿ ಬೇಕಾದ 400 ಹುದ್ದೆಗಳನ್ನು ಮೇಲಿನ (1)ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯದಂತೆ ತಕ್ಷಣ ತುಂಬಲು ಸಚಿವಸಂಪುಟವು ಅನುಮೋದನೆ ನೀಡಿದೆ. ಈಗಾಗಲೇ ಸದರಿ ಹುದ್ದೆಗಳನ್ನು ತುಂಬಲು ಮೇಲಿನ (2) ರಲ್ಲಿ ಓದಲಾದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ.

ಮುಂದುವರೆದು ವಿವಿಧ ಇಲಾಖೆಗಳಲ್ಲಿ ಖಾಲಿಯಿರುವ ಹುದ್ದೆಗಳನ್ನು ತುಂಬುವ ವಿಷಯದಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಸಂಬಂಧಪಟ್ಟ ಅಧಿಕಾರಿಗಳೊಂದಿಗೆ ಒಂದು ಸಭೆಯನ್ನು ನಡೆಸಿ ನಂತರ ಸೂಕ್ತ ಶಿಫಾರಸ್ಸುಗಳೊಂದಿಗೆ ಮಾನ್ಯ ಮುಖ್ಯಮಂತ್ರಿಗಳಿಗೆ ಮಂಡಿಸಿ, ಅವರಿಂದ ಅನುಮೋದನೆ ಪಡೆದು ನಂತರ ಉಳಿದ ಹುದ್ದೆಗಳನ್ನು ತುಂಬಲು ಕ್ರಮ ಜರುಗಿಸಬೇಕೆಂದು ಸಚಿವಸಂಪುಟವು ನಿರ್ಧರಿಸಿದೆ.

ಅದರಂತೆ, ದಿನಾಂಕ 28-05-2012 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆಸು) ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ) ಇವರೊಂದಿಗೆ ನಡೆಸಿದ ಸಭೆಯಲ್ಲಿ ಒಟ್ಟಾರೆಯಾಗಿ ಚರ್ಚಿಸಿ ತೆಗೆದುಕೊಂಡಿರುವ ತೀರ್ಮಾನದ ಹಿನ್ನೆಲೆಯಲ್ಲಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 08 ಈಸಪ 2012, ಬೆಂಗಳೂರು, ದಿನಾಂಕ : 05-06-2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ದಿನಾಂಕ 28-05-2012ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡಿರುವ ತೀರ್ಮಾನದಂತೆ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಸೇವೆಗಳನ್ನು ಒದಗಿಸುತ್ತಿರುವ ಇಲಾಖೆಗಳಲ್ಲಿ ಕೆಳಕಂಡಂತೆ ಡಾಟಾ ಎಂಟ್ರಿ ಅಪರೇಟರುಗಳನ್ನು ನೇಮಕ ಮಾಡಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಅ) ಸಾರಿಗೆ ಇಲಾಖೆಯ ಸಾರಿಗೆ ನಿಗಮಗಳು: ಬಸ್ ಪಾಸುಗಳಿಗೆ ಈಗ ಬೇಡಿಕೆಯಿರುವುದರಿಂದ ಸಾರಿಗೆ ನಿಗಮಗಳು ಮೂರು ತಿಂಗಳ ಅವಧಿಗೆ ಮಾತ್ರ ಸೀಮಿತಗೊಳಿಸಿ ಅತ್ಯಂತ ಅವಶ್ಯವಾಗಿ ಬೇಕಾದಂತಹ ಕನಿಷ್ಠ ಸಂಖ್ಯೆಯಲ್ಲಿ ಡಾಟಾ ಎಂಟ್ರಿ ಆಪರೇಟರುಗಳನ್ನು ನೇಮಿಸಿಕೊಳ್ಳಲು ಅನುಮೋದನೆ ನೀಡಲಾಗಿದೆ.

ಆ) ಶಿಕ್ಷಣ ಇಲಾಖೆ 20 ಹುದ್ದೆಗಳು.

ಇ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವಿಕಲಚೇತನ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ: 30 ಹುದ್ದೆಗಳು (ಜಿಲ್ಲೆಗೆ ಒಂದರಂತೆ)

ಮೇಲಿನ ಡಾಟಾ ಎಂಟ್ರಿ ಆಪರೇಟರುಗಳನ್ನು ಇಲಾಖೆಯಲ್ಲಿ ಮಂಜೂರಾಗಿರುವ ಹುದ್ದೆಗಳಲ್ಲಿ ಖಾಲಿ ಇರುವ ಬೆರಳಚ್ಚುಗಾರರು/ದ್ವಿತೀಯ ದರ್ಜೆ ಸಹಾಯಕರು ಹುದ್ದೆಗಳೆದುರಾಗಿ ಸದರಿ ಹುದ್ದೆಗಳು ನಿಯಮಾನುಸಾರ ಭರ್ತಿಯಾಗುವವರೆಗೆ ಅಥವಾ ಆರು ತಿಂಗಳು ಅವಧಿಗೆ ಸಂಚಿತ ವೇತನದಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳತಕ್ಕದ್ದು.

ಈ ಮೇಲಿನ ನೇಮಕಾತಿಗಳಿಗೆ ತಗಲುವ ವೆಚ್ಚವನ್ನು ಸಂಬಂಧಿತ ಇಲಾಖೆಗಳು ಆಯಾ ಇಲಾಖೆಗಳ ಕಚೇರಿ ವೆಚ್ಚಗಳ ಲೆಕ್ಕ ಶೀರ್ಷಿಕೆಯಡಿಯಲ್ಲಿ ಭರಿಸುವುದು.

ಈ ಆದೇಶವನ್ನು ದಿನಾಂಕ 28-05-2012 ರಂದು ನಡೆದ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಜಿ. ಶಶಿಕಲಾ**

ಸರ್ಕಾರದ ಅಧೀನ ಕಾರ್ಯದರ್ಶಿ,(ಪ್ರ)

ಪಿ.ಆರ್. 1612

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಸಿಆಸುಇ (ಆಸು-ಕಾರ್ಯಾಧ್ಯಯನ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಕಲಂ 9 ರನ್ವಯ ಟೆಂಡರ್ ಕರೆಯುವ ಪ್ರಾಧಿಕಾರ ಮತ್ತು ಟೆಂಡರ್ ಒಪ್ಪಿಗೆ ನೀಡುವ ಪ್ರಾಧಿಕಾರದ ನಿಯುಕ್ತಿ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮ 2011ರ ಪರಿಣಾಮಕಾರಿ ಅನುಷ್ಠಾನಗೊಳಿಸುವುದಕ್ಕೆ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 20 ಇಕಾಅ 2012 ದಿನಾಂಕ 6–3–2012 ರ ಪ್ರಕಾರ "ಸಕಾಲ ಮಿಷನ್" ಅನ್ನು ಸಿಆಸುಇ (ಅಸು) ಯ ಅಂಗವಾಗಿ ರಚಿಸಲಾಗಿದೆ.

ಸಕಾಲ ಮಿಷನ್ ಅನ್ನು ಒಂದು ಅಭಿಯಾನ ಮೂಲಕ ಸಕಾಲ ಸೇವೆಗಳ ಖಾತರಿ ಅಧಿನಿಯಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕೆ ಎಲ್ಲಾ ಬೇಕಾಗಿರತಕ್ಕ ಕ್ರಮವನ್ನು ಸಮಯಬದ್ಧವಾಗಿ ತೆಗೆದುಕೊಳ್ಳುವ ಅವಶ್ಯಕತೆ ಇರುತ್ತದೆ. ಈ ಸಂದರ್ಭದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಕಲಂ 9 ರನ್ವಯ ಸಕಾಲ ಮಿಷನ್ ಎಲ್ಲಾ ಟೆಂಡರ್ ಗಳನ್ನು ಕರೆಯುವ ಸಲುವಾಗಿ "ಟೆಂಡರ್ ಅಂಗೀಕಾರ ಪ್ರಾಧಿಕಾರ" ಮತ್ತು "ಟೆಂಡರ್ ಕರೆಯುವ ಪ್ರಾಧಿಕಾರ" ನೇಮಕಾತಿ ಆದೇಶ ಹೊರಡಿಸಬೇಕಾಗಿರುತ್ತದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 136 ಇಕಾಅ 2012, ಬೆಂಗಳೂರು, ದಿನಾಂಕ : 25–5–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 (ಕರ್ನಾಟಕ 2000ರ 29ನೇ ಅಧಿನಿಯಮ) ರಲ್ಲಿನ ಕಲಂ 9 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಯಿಂದ ಈ ಕೆಳಕಂಡ ಅಧಿಕಾರಿಗಳನ್ನು "ಸಕಾಲ ಮಂಡಳಿಯ" ಎಲ್ಲಾ ಟೆಂಡರ್ ಮತ್ತು ಸಂಗ್ರಹಣೆಗಳಲ್ಲಿ ಸಲುವಾಗಿ ನೇಮಿಸಲಾಗಿದೆ.

| | |
|---|---|
| 1) ಟೆಂಡರ್ ಅಂಗೀಕಾರ ಪ್ರಾಧಿಕಾರ | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಆಸು) ಮತ್ತು ಮಂಡಳಿ ನಿರ್ದೇಶಕರು ಸಕಾಲ ಮಂಡಳಿ |
| 2) ಟೆಂಡರ್ ಕರೆಯುವ ಪ್ರಾಧಿಕಾರ | ಆಡಳಿತಾಧಿಕಾರಿ, ಸಕಾಲ ಮಂಡಳಿ, ಸಿಆಸುಇ (ಆಡಳಿತ ಸುಧಾರಣೆ) |

ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ: 10–07–1996ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಗೀತಾ ಎಲ್**

ಪಿ.ಆರ್. 1613

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಆಸು–ನಾಗರೀಕ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಯೋಜನಾ ಇಲಾಖೆಯ ಅಪರ/ಜಂಟಿ ಕಾರ್ಯದರ್ಶಿಗಳ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 29 ಸಅಸೇ 2008, ದಿನಾಂಕ: 27–02–2008.

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 290 ಸಅಸೇ 2009, ದಿನಾಂಕ: 10–06–2009.

3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 181 ಸಆಸೇ 2010, ದಿನಾಂಕ: 01–04–2010.

4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 188 ಸಆಸೇ 2011, ದಿನಾಂಕ: 07–04–2011.

5) ಯೋಜನಾ ಇಲಾಖೆಯ ಕಡತ ಸಂಖ್ಯೆ: ಪಿಡಿ 19 ಎಸ್‌ಪಿಬಿ 2012.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 27–02–2008 ರ ಸರ್ಕಾರಿ ಆದೇಶದಲ್ಲಿ ಯೋಜನಾ ಇಲಾಖೆಯಲ್ಲಿ ಅಪರ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಓದಲಾದ (2) ರಿಂದ (4)ರ ವರೆಗಿನ ಸರ್ಕಾರಿ ಆದೇಶಗಳಲ್ಲಿ ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಕಡತದಲ್ಲಿ ಯೋಜನಾ ಇಲಾಖೆಯು ಡಾ: ನಂಜುಡಪ್ಪ ವರದಿಯ ಶಿಫಾರಸ್ಸುಗಳ ಅನುಷ್ಠಾನಕ್ಕಾಗಿ ವಿಶೇಷ ಅಭಿವೃದ್ಧಿ ಯೋಜನೆಯು ಮುಂದಿನ ನಾಲ್ಕು ವರ್ಷಗಳ ಅವಧಿಯವರೆಗೆ ಮುಂದುವರೆಸುವ ಅನಿವಾರ್ಯತೆ ಇರುವ ಹಿನ್ನೆಲೆಯಲ್ಲಿ ವಿಶೇಷ ಕೋಶವನ್ನು ಪೂರಕ ಸಿಬ್ಬಂದಿಯೊಂದಿಗೆ ಮತ್ತೆ ದಿನಾಂಕ: 01–04–2012 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 289 ಸಅಸೇ 2012. ಬೆಂಗಳೂರು, ದಿನಾಂಕ: 4ನೇ ಜೂನ್ 2012**

ಯೋಜನಾ ಇಲಾಖೆಯಲ್ಲಿಯ ಜಂಟಿ ಕಾರ್ಯದರ್ಶಿ/ಅಪರ ಕಾರ್ಯದರ್ಶಿಗಳ ಹುದ್ದೆಯನ್ನು ದಿನಾಂಕ: 01-04-2012 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಡನೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್/ಜಮೇದಾರ್ | 1 ಹುದ್ದೆ ಹೊರ ಗುತ್ತಿಗೆಯಿಂದ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ: 10-07-1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಲಕ್ಷ್ಮೀನಾರಾಯಣ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ.

ಪಿ.ಆರ್. 1614 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶವನ್ನು ಹಾಗೂ ಪೂರಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 1994, ದಿನಾಂಕ: 07-07-1994.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 1999, ದಿನಾಂಕ: 22-10-1999.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 09 ಸಸಿವಿ 2007, ದಿನಾಂಕ: 02-03-2007.
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 233 ಸ.ಆ.ಸೇ 2009, ದಿನಾಂಕ: 15-05-2009.
5) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 197 ಸ.ಆ.ಸೇ 2009, ದಿನಾಂಕ: 22-04-2010.
6) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 204 ಸ.ಆ.ಸೇ 2011, ದಿನಾಂಕ: 15-04-2011.
7) ಜಲ ಸಂಪನ್ಮೂಲ ಇಲಾಖೆಯ ಕಡತ ಸಂಖ್ಯೆ ಜಸಂಇ 107 ಕೆಬಿಎನ್ 2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2) ರ ಸರ್ಕಾರದ ಆದೇಶಗಳಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಈ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಸೃಜಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3) ರಿಂದ (6) ರ ವರೆಗಿನ ಸರ್ಕಾರಿ ಆದೇಶಗಳಲ್ಲಿ ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಕಡತದಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶದಲ್ಲಿ ಇತ್ತೀಚೆಗೆ ದಿನಾಂಕ: 24-01-2012ರ ಸರ್ಕಾರಿ ಆದೇಶದಲ್ಲಿ ಒಟ್ಟಾರೆ 5.30 ಲಕ್ಷ ಹೆಕ್ಟೇರ್ ಜಮೀನಿಗೆ ನೀರಾವರಿ ಕಲ್ಪಿಸಬಹುದಾದ ರೂ. 17.207.00 ಕೋಟಿಗಳ ಅಂದಾಜಿನ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3 ಕಾಮಗಾರಿಯ ರಾಜ್ಯದ ಅತಿ ಮಹತ್ವದ ನೀರಾವರಿ ಯೋಜನೆಯ ವಿಷಯವನ್ನು ಸಹ ಈ ಶಾಖೆಯಲ್ಲಿ ನಿರ್ವಹಿಸುತ್ತಿರುವುದರಿಂದ, ಜಲ ಸಂಪನ್ಮೂಲ ಇಲಾಖೆಯ ವಿಶೇಷ ಕೋಶ ಹಾಗೂ ಪೂರಕ ಹುದ್ದೆಗಳ ಅಗತ್ಯವಿರುವುದರಿಂದ ವಿಶೇಷ ಕೋಶ ಹಾಗೂ ಪೂರಕ ಹುದ್ದೆಗಳನ್ನು ದಿನಾಂಕ: 01-04-2012 ರಿಂದ 31-03-2013 ರವರೆಗೆ ಮುಂದುವರೆಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾದ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2 | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 |
| 3 | ಶಾಖಾಧಿಕಾರಿ | **1** |
| 4 | ಹಿರಿಯ ಸಹಾಯಕ | 2 |
| 5 | ಸಹಾಯಕ | 1 |
| 6 | ಶೀಘ್ರಲಿಪಿಗಾರರು | 1 |

| | | |
|---|---|---|
| 7 | ಬೆರಳಚ್ಚುಗಾರರು | 1 |
| 8 | ದಲಾಯತ್ | 1 |

ವಿಶೇಷಾಧಿಕಾರಿ ಹಾಗು ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ಗ್ರೂಪ್-ಡಿ | 1 |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 291 ಸಆಸೇ 2012. ಬೆಂಗಳೂರು, ದಿನಾಂಕ: 4ನೇ ಜೂನ್ 2012**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಹಾಗೂ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 01-04-2012 ರಿಂದ 31-03-2013 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 01 |
| 2 | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 01 |
| 3 | ಶಾಖಾಧಿಕಾರಿ | 01 |
| 4 | ಹಿರಿಯ ಸಹಾಯಕ | 02 |
| 5 | ಸಹಾಯಕ | 01 |
| 6 | ಶೀಘ್ರಲಿಪಿಗಾರರು | 01 |
| 7 | ಬೆರಳಚ್ಚುಗಾರರು | 01 |
| 8 | ದಲಾಯತ್ | 01 |

ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ಗ್ರೂಪ್-ಡಿ | 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10-07-1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಲಕ್ಷ್ಮೀನಾರಾಯಣ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ.

ಪಿ.ಆರ್. 1615

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(ಸೇವೆಗಳು-3).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** 2011-12ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಮಂಡ್ಯ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿದ್ದ ರಾಜ್ಯದ ಪಾಲಿನ ಒಂದನೇ ಅನುದಾನ ರೂ. 12,68,000 ಗಳನ್ನು 2012-13ನೇ ಸಾಲಿನಲ್ಲಿ ಭರಿಸಿ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-18014/01/: 2011-12 ಡಿಆರ್‌ಡಿಎ (ಎಸ್‌ಎಲ್‌ನಂ. 10) ದಿನಾಂಕ: 15-04-2011.

2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 03-05-2011.

3) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ: 20-08-2011.

4) ಜಿಲ್ಲಾ ಪಂಚಾಯತ್ ಮಂಡ್ಯ ಇವರ ಪತ್ರ ಸಂಖ್ಯೆ: ಜಿಪಂಮ: ಮುಲೆಆ:ಲೆಸ:7:ಡಿಆರ್‌ಡಿಎ:12-13 ದಿನಾಂಕ: 16-05-2012 ಮತ್ತು 30-05-2012.

**ಪ್ರಸ್ತಾವನೆ :**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತದೆ.2011-12 ನೇ ಸಾಲಿಗೆ ಕೇಂದ್ರ ಸರ್ಕಾರ ರಾಜ್ಯದ ಚಿಕ್ಕಮಗಳೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತ್ ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿರುವ (1) ಪತ್ರದಲ್ಲಿ ರೂ. 9,67,84,000 ಬಿಡುಗಡೆ ಮಾಡಿವೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ. 3,22,52,000 ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ 2010-11ನೇ ಸಾಲಿನ ವರ್ಷಾಂತ್ಯದಲ್ಲಿ ಕೇಂದ್ರ ಸರ್ಕಾರವು ಚಿಕ್ಕಮಗಳೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಯೋಜನೆಯಡಿ ಹೆಚ್ಚುವರಿಯಾಗಿ ರೂ. 5,77,69,000 ಗಳನ್ನು ಬಿಡುಗಡೆ ಮಾಡಿತ್ತು. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು, ರಾಜ್ಯದ ಪಾಲಿನ ಅನುದಾನ ರೂ. 1,98,25,000 ನ್ನು 2011-12 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದಿಂದ ಭರಿಸಿ ಬಿಡುಗಡೆ ಮಾಡಿದೆ. ಈ ಕಾರಣದಿಂದ ಸದರಿ ವರ್ಷದಲ್ಲಿ ಒಂದನೇ ಕಂತಿನ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ಚಿಕ್ಕಬಳ್ಳಾಪುರ, ಹಾಸನ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ಅನುದಾನ ಕಡಿಮೆಯಿದ್ದು, ಅನುದಾನದ ಲಭ್ಯತೆಗೆ ಸೀಮಿತಗೊಳಿಸಿ ಹಾಗೂ ಉಳಿದ ಜಿಲ್ಲಾ ಪಂಚಾಯತಿಗಳಿಗೆ ಪೂರ್ಣವಾಗಿ ಒಂದನೇ ಕಂತಿನ ರಾಜ್ಯದ ಪಾಲಿನ ಅನುದಾನ ರೂ. 3,11,82,000 ಬಿಡುಗಡೆ ಮಾಡಲಾಗಿತ್ತು. ಈ ಪೈಕಿ ಮಂಡ್ಯ ಜಿಲ್ಲಾ ಪಂಚಾಯತಿ ರೂ. 12,68,000 ಬಿಡುಗಡೆ ಮಾಡಲಾಗಿತ್ತು. ಆದರೆ, ಓದಲಾಗಿದೆ 4 ರ ಪತ್ರದಲ್ಲಿ ಮಂಡ್ಯ ಜಿಲ್ಲಾ ಪಂಚಾಯತಿಯು ಸದರಿ ಅನುದಾನವನ್ನು ಖಜಾನೆಯಿಂದ ಸೆಳೆದಿರುವುದಿಲ್ಲವೆಂದು ತಿಳಿಸುತ್ತಾ, ಮಂಡ್ಯ ಜಿಲ್ಲೆಯ ಖಜಾನಾಧಿಕಾರಿಗಳ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಆದುದರಿಂದ, ರೂ, 12,68,000 ಅನುದಾನವನ್ನು 2012-13 ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಮಂಡ್ಯ ಜಿಲ್ಲಾ ಪಂಚಾಯತಿಗೆ ನೀಡಿರುವ ಅನುದಾನದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿರುತ್ತದೆ ಆದುದರಿಂದ ಆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011. ಬೆಂಗಳೂರು, ದಿನಾಂಕ: 7ನೇ ಜೂನ್ 2012**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2011-12 ನೇ ಸಾಲಿನಲ್ಲಿ ಮಂಡ್ಯ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿದ್ದ, ರೂ. 12,68,000 (ರೂ. ಹನ್ನೆರಡು ಲಕ್ಷದ ಆರವತ್ತೆಂಟು ಸಾವಿರ ಮಾತ್ರ) ಅನುದಾನವನ್ನು 2012-13 ನೇ ಸಾಲಿನ ರಾಜ್ಯದ ಆಯವ್ಯಯದಿಂದ ಭರಿಸಿ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

(ರೂ. ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2011-12ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಅಡಿ ಕೇಂದ್ರ ಸರ್ಕಾರ ಬಿಡುಗಡೆ ಒಂದನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು 2011-12ನೇ ಸಾಲಿನಲ್ಲಿ ಬಿಡುಗಡೆ ಮಾಡಿದ್ದ ಅನುದಾನ | 2011-12ನೇ ಸಾಲಿನ ಒಂದನೇ ಕಂತಿನ ಅನುದಾನವನ್ನು 2012-13ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ನಿಗದಿ ಪಡಿಸಿದ ಅನುದಾನದಲ್ಲಿ ಭರಿಸಿ ಬಿಡುಗಡೆ ಮಾಡುತ್ತಿರುವುದು |
|---|---|---|---|---|---|---|
| 1 | ಮಂಡ್ಯ | 412 | 1100ZZ0001 | 38,05,000 | 12,68,000 | 12,68,000 |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ: "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196– ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ – (ಕೇಂದ್ರ ಪುರಸ್ಕೃತ ಯೋಜನೆ) 2011–2012 ಲಿಂಕ್ ಕೋಡ್ 2515–00–196–6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6)ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತ್ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಮಂಡ್ಯ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಮಂಡ್ಯ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5 ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಧಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಮಂಡ್ಯ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

2012–13ನೇ ಸಾಲಿಗೆ ಒಂದನೇ ಕಂತಿನ ಅನುದಾನ ಕೋರಿಕೆ ಪ್ರಸ್ತಾವನೆ ಸಲ್ಲಿಸುವಾಗ ಸದರಿ ಮೊತ್ತವನ್ನು ಸಹ ಸೇರಿಸಿಕೊಂಡು ಪ್ರಸ್ತಾವನೆ ಸಲ್ಲಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ: ಗ್ರಾಅಪ 4 ಪಿಬಿಎಸ್ 2012–13 ದಿನಾಂಕ: 23–05–2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೀಪ**

ನಿರ್ದೇಶಕರು (ಸ್ವಉಕಾ)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಪಿ.ಆರ್. 1616

## ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಮಂಗಳೂರಿನ ಉಪನಿರ್ದೇಶಕರ ಹುದ್ದೆಯನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ಗುಲ್ಬರ್ಗಾಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ :** **1**. ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 79 ಕೆಎಂಯು 2006 ದಿನಾಂಕ: 28–12–2006.

**2**. ಪತ್ರ ಸಂಖ್ಯೆ ಅಪ್ರಾಸಂಪ ಇಎಸ್‌ಟಿ.1/18/2012–13, ದಿನಾಂಕ: 07–05–2012.

**ಪ್ರಸ್ತಾವನೆ :**

ಮೈಸೂರಿನಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಉಪನಿರ್ದೇಶಕರ ಕಛೇರಿಯ ಉಪನಿರ್ದೇಶಕರ ಹುದ್ದೆಯನ್ನು ಆಡಳಿತದ ಹಿತದೃಷ್ಟಿಯಿಂದ ಶ್ರೀಮಂತಿಬಾಯಿ ಸ್ಮಾರಕ ಸರ್ಕಾರಿ ವಸ್ತು ಸಂಗ್ರಹಾಲಯ, ಬಿಜೈ, ಮಂಗಳೂರು ಇಲ್ಲಿಗೆ ಸ್ಥಳಾಂತರಿಸಿ, ಸದರಿ ಸ್ಥಳಾಂತರಿಸಿದ ಉಪನಿರ್ದೇಶಕರ ಹುದ್ದೆಗೆ ಶ್ರೀ ಹೆಚ್.ಟಿ. ತಳವಾರ್ ಉಪನಿರ್ದೇಶಕರು ಇವರನ್ನು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ವರ್ಗಾಯಿಸಲಾಗಿತ್ತು.

ಗುಲ್ಬರ್ಗಾ ಹಾಗೂ ಬೀದರ್ ಗಳನ್ನು ಪಾರಂಪರಿಕ ನಗರಗಳೆಂದು ಈ ಹಿಂದೆಯೇ ಘೋಷಿಸಲಾಗಿದೆ. ಪುರಾತತ್ವ ಸಂಶೋಧನೆಗೆ ಸಂಬಂಧಿಸಿದಂತೆ ಮೈಸೂರು ಹಳೆಯ ಸಂಸ್ಥಾನವು ಅಗ್ರ ಸ್ಥಾನದಲ್ಲಿದ್ದು, ಸಂಶೋಧನೆಗಳು ಅವಿರತವಾಗಿ ನಡೆದುಕೊಂಡು ಬಂದಿರುತ್ತವೆ. ಗುಲ್ಬರ್ಗಾ ಹಾಗೂ ಬೆಳಗಾಂ ವಿಭಾಗಗಳು ಪುರಾತನ ಸ್ಮಾರಕಗಳ ಆಗರವಾಗಿದ್ದು, ಸಂರಕ್ಷಿತ ಸ್ಮಾರಕಗಳು ಹೆಚ್ಚಿನ ಸಂಖ್ಯೆಗಳಲ್ಲಿರುವುದರಿಂದ ಉತ್ತರ

ಕರ್ನಾಟಕದಲ್ಲಿರುವ ಜಿಲ್ಲೆಗಳಲ್ಲಿ ಶಾಸನಗಳ ಸರ್ವೇಕ್ಷಣೆ ಕೈಗೊಳ್ಳುವುದು, ಶಾಸನಗಳನ್ನು ಸಂಗ್ರಹಿಸಿ ಪ್ರತಿ ಜಿಲ್ಲೆಯ ಶಾಸನ ಸಂಪುಟಗಳನ್ನು ಸಿದ್ದಪಡಿಸುವುದು, ಪುರಾತತ್ವ ಅನ್ವೇಷಣೆ, ಸಂಗ್ರಹಾಲಯಗಳ ಅಭಿವೃದ್ಧಿ ಮತ್ತು ವಿಸ್ತರಣೆ, ಹೊಸ ಸಂಗ್ರಹಾಲಯಗಳ ಸ್ಥಾಪನೆಗೆ ಆವಿಷ್ಕಾರ ಸಹಾಯಕ ನಿರ್ದೇಶಕರು, ಸಹಾಯಕ ಕ್ಯೂರೇಟರ್, ಕ್ಯೂರೇಟರ್ ಮುಂತಾದ ಸಿಬ್ಬಂದಿ ವರ್ಗದವರಿಗೆ ಮಾರ್ಗದರ್ಶನ, ಜಿಲ್ಲಾ ಆಡಳಿತದೊಡನೆ ಸಂಪರ್ಕ ಸಾಧಿಸಿ ರಾಜ್ಯ ಸಂರಕ್ಷಿತ ಸ್ಮಾರಕಗಳ ಸುತ್ತಮುತ್ತಲಿನ ಒತ್ತುವರಿ ಮತ್ತು ಅತಿಕ್ರಮಣವನ್ನು ತೆರಗಟ್ಟುವಿಕೆ ಸ್ಮಾರಕಗಳ ಬಗ್ಗೆ ಮಾಹಿತಿ ಕಲೆಹಾಕುವಿಕೆ, ಇವುಗಳೆಲ್ಲವನ್ನು ಕ್ರಮಬದ್ಧವಾಗಿ ನಿರ್ವಹಿಸಲು ಹಾಗೂ ಉತ್ತರ ಕರ್ನಾಟಕದಲ್ಲಿ ಸಾಂಸ್ಕೃತಿಕವಾಗಿ ಮುಂಚೂಣಿಯಲ್ಲಿರುವ ಹೈದ್ರಾಬಾದ್ ಕರ್ನಾಟಕಕ್ಕೆ ಆದ್ಯತೆ ನೀಡುವ ಹಿನ್ನೆಲೆಯಲ್ಲಿ ಉಪನಿರ್ದೇಶಕರ ಹುದ್ದೆ ಅವಶ್ಯಕತೆ ಇರುತ್ತದೆ. ಅಲ್ಲದೇ ಶ್ರೀ ಹೆಚ್.ಟಿ. ತಳವಾರ್ ರವರು ಈಗಾಗಲೇ ಸನ್ನತಿಯಲ್ಲಿ ಉತ್ಖನನವನ್ನು ಕೈಗೊಂಡಿದ್ದು, ಸಂಶೋಧನಾ ದೃಷ್ಟಿಯಿಂದ ಈ ಉತ್ಖನನವನ್ನು ಮುಂದುವರೆಸುವುದು ಸೂಕ್ತವಾಗಿರುತ್ತದೆ. ಆದ್ದರಿಂದ ಶ್ರೀ ಹೆಚ್.ಟಿ. ತಳವಾರ್, ಉಪನಿರ್ದೇಶಕರು, ಶ್ರೀಮಂತಿಬಾಯಿ ಸ್ಮಾರಕ ವಸ್ತು ಸಂಗ್ರಹಾಲಯ, ಬಿಜೈ, ಮಂಗಳೂರು ಇವರನ್ನು ಗುಲ್ಬರ್ಗಾ ವಿಭಾಗದ ಉಪನಿರ್ದೇಶಕರನ್ನಾಗಿ ಹುದ್ದೆಯ ಸಮೇತ ಸ್ಥಳಾಂತರಿಸುವಂತೆ ಹಾಗೂ ಪ್ರಸ್ತುತ ಬಟವಾಡೆ ಅಧಿಕಾರಿಯಾ ಕಾರ್ಯನಿರ್ವಹಿಸುತ್ತಿರುವ ಸಹಾಯಕ ನಿರ್ದೇಶಕರು, ಸರ್ಕಾರಿ ವಸ್ತು ಸಂಗ್ರಹಾಲಯ ಇವರ ಬದಲಾಗಿ ಉಪನಿರ್ದೇಶಕರನ್ನೇ ವೇತನ ಬಟವಾಡೆ ಅಧಿಕಾರಿಯನ್ನಾಗಿ ನೇಮಿಸುವ ಬಗ್ಗೆ ಸರ್ಕಾರದ ಆದೇಶ ಹೊರಡಿಸುವಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 114 ಕೆಎಂಯು 2012, ಬೆಂಗಳೂರು, ದಿನಾಂಕ : 06-06-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮಂತಿಬಾಯಿ ಸ್ಮಾರಕ ವಸ್ತು ಸಂಗ್ರಹಾಲಯ, ಮಂಗಳೂರಿನಲ್ಲಿರುವ ಉಪನಿರ್ದೇಶಕರ ಹುದ್ದೆಯನ್ನು ಆಡಳಿತದ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ವಸ್ತು ಸಂಗ್ರಹಾಲಯ ಗುಲ್ಬರ್ಗಾ ವಿಭಾಗ ಇಲ್ಲಿಗೆ ಸ್ಥಳಾಂತರಿಸಿದೆ.

ಈ ಆದೇಶವನ್ನು ದಿನಾಂಕ: 10-07-96ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರಲ್ಲಿ ಇಲಾಖಾ ಕಾರ್ಯದರ್ಶಿ ಅವರಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಗೀತಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1654 ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

(ಆಡಳಿತ ಕನ್ನಡ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಸಾಮಾಜಿಕ, ಆರ್ಥಿಕ ಮತ್ತು ಜಾತಿಗಣತಿ-2011 (ಎಸ್‌ಇಸಿಸಿ-2011) ಸಂಬಂಧ ಕರಡು ಗಣತಿ ಪಟ್ಟಿ ಹಾಗೂ ಅಂತಿಮ ಗಣತಿ ಪಟ್ಟಿ ಮುದ್ರಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಮಂತ್ರಾಲಯ (MORD) ಹೊಸ ದೆಹಲಿ, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕ್ಯೂ 1461616/2011 ಎ1 (ಆರ್‌ಡಿ) ದಿನಾಂಕ 30-05-2011.
2) ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 29 ಎಸ್‌ಜೆವೈ 2011 (ಎ1) ದಿನಾಂಕ: 28-09-2011.
3) ರಾಜ್ಯ ಮುಖ್ಯ ಚುನಾವಣಾಧಿಕಾರಿಗಳ ಪತ್ರ ಸಂಖ್ಯೆ: DPAR 583 Elections 2012, ದಿನಾಂಕ: 05-05-2012.
4) ಹಣಕಾಸು ಇಲಾಖೆ ಅಧಿಸೂಚನೆ ಸಂಖ್ಯೆ. ಆ ಇ 485 ವೆಚ್ಚ 12/12, ದಿನಾಂಕ : 02-06-2012.

**ಪ್ರಸ್ತಾವನೆ :**

ಕೇಂದ್ರ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಮಂತ್ರಾಲಯ ಹಾಗೂ ಕೇಂದ್ರ ವಸತಿ ಮತ್ತು ನಗರ ಬಡತನ ನಿರ್ಮೂಲನ ಮಂತ್ರಾಲಯಗಳ ನಿರ್ದೇಶನಗಳಂತೆ ರಾಜ್ಯದಲ್ಲಿ ಸಾಮಾಜಿಕ, ಆರ್ಥಿಕ ಮತ್ತು ಜಾತಿ ಗಣತಿಯನ್ನು (ಎಸ್‌ಇಸಿಸಿ-2011) ನವೆಂಬರ್ ಮತ್ತು ಡಿಸೆಂಬರ್ 2011ರ ಮಾಹೆಗಳಲ್ಲಿ ನಡೆಸಲು ತೀರ್ಮಾನ ಕೈಗೊಳ್ಳಲಾಗಿತ್ತು ಅದರಂತೆ, ಪ್ರಥಮ ಹಂತದಲ್ಲಿ ಬೆಂಗಳೂರು ಮತ್ತು ಬೆಳಗಾಂ ವಿಭಾಗ 16 ಜಿಲ್ಲೆಗಳಲ್ಲಿ ಹಾಗೂ ದ್ವಿತೀಯ ಹಂತದಲ್ಲಿ ಗುಲ್ಬರ್ಗಾ ಮತ್ತು ಮೈಸೂರು ವಿಭಾಗದ 14 ಜಿಲ್ಲೆಗಳಲ್ಲಿ ಗಣತಿ ಕಾರ್ಯ ನಡೆಸಲು ತೀರ್ಮಾನಿಸಲಾಯಿತು. ಗಣತಿ ಕಾರ್ಯ ಪ್ರಕ್ರಿಯೆ ಪೂರ್ಣಗೊಂಡ ಮೇಲೆ ದಿನಾಂಕ: 15-06-2012ರ ನಂತರ ಕರಡು ಗಣತಿ ಪಟ್ಟಿಯನ್ನು ಮತ್ತು 30-08-2012ರಂದು ಅಂತಿಮ ಗಣತಿ ಪಟ್ಟಿಯನ್ನು ಪ್ರಕಟಿಸಲು ರಾಜ್ಯ ಸರ್ಕಾರ ತೀರ್ಮಾನ ಕೈಗೊಂಡಿದೆ. ಇದು ಕಾಲಮಿತಿ ಕಾರ್ಯಕ್ರಮವಾಗಿದ್ದು ನಿಗದಿತ ಅವಧಿಯಲ್ಲಿ ಮುದ್ರಿಸಬೇಕಾಗಿದೆ. ಗಣತಿ ಕರಡು ಪಟ್ಟಿ ಎಸ್‌ಇಸಿಸಿ-2011 ಮತ್ತು ಅಂತಿಮ ಪಟ್ಟಿ ಮುದ್ರಣವು ವಿಧಾನಸಭಾ ಮತದಾರರ ಪಟ್ಟಿ ಮುದ್ರಣಕ್ಕೆ ಹೊಂದಿಕೆ ಬರುವುದರಿಂದ ಕಳೆದ (2008ನೇ ಸಾಲಿನಲ್ಲಿ) ವಿಧಾನ ಸಭಾ ಮತದಾರರ ಪಟ್ಟಿ ಮುದ್ರಿಸಿದ ದರಪಟ್ಟಿ ಹಾಗೂ ಮುದ್ರಣ ವೆಂಡರ್‌ಗಳ ಪಟ್ಟಿಯನ್ನು ಮುಖ್ಯ ಚುನಾವಣಾಧಿಕಾರಿಗಳಿಂದ ಪಡೆಯಲಾಗಿದೆ. ಈ ಕಾರ್ಯವನ್ನು ಈ ದರ ಪಟ್ಟಿಯಂತೆ ಮತ್ತು ಈಗಾಗಲೇ ಮುಖ್ಯ ಚುನಾವಣೆ ಅಧಿಕಾರಿಗಳು

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೆ॥ ಐಸಿಎಲ್ ಷುಗರ್ಸ್ ಲಿಮಿಟೆಡ್ ಇವರಿಗೆ ಕೈಗಾರಿಕಾ ನೀತಿ 1996-2001ರ ಅನ್ವಯ ತೆರಿಗೆ ರಿಯಾಯಿತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) 69ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆ ದಿನಾಂಕ 18-11-2000

2) ದಿನಾಂಕ 29-12-2000ರ ನಿರ್ದೇಶನಾಲಯದ ಪತ್ರ

3) ಆಯುಕ್ತಾಲಯದ ಪತ್ರ ಸಂಖ್ಯೆ: ಐಡಿಎಲ್/ಇ5/214/ಐಸಿಎಲ್/ಎನ್.ಯು.ಸಿ./2001-02, ದಿನಾಂಕ 18-7 2001.

4) ರಿಟ್ ಅರ್ಜಿ ಸಂಖ್ಯೆ: 32700-32702/2002 ರಲ್ಲಿ ದಿನಾಂಕ 8-7-2003 ರಂದು ನೀಡಿದ ತೀರ್ಪು ಮತ್ತು ದಿನಾಂಕ 15-10-2003 ರಂದು ನೀಡಿದ ಮುಂದುವರೆದ ಆದೇಶ.

**ಪ್ರಸ್ತಾವನೆ:**

ಮೆ॥ ಐ.ಸಿ.ಎಲ್. ಷುಗರ್ಸ್ ಲಿಮಿಟೆಡ್, ಮಾಕವಳ್ಳಿ ಗ್ರಾಮ, ಕೆ.ಆರ್.ಪೇಟ್ ತಾಲ್ಲೂಕು, ಮಂಡ್ಯ ಜಿಲ್ಲೆಯಲ್ಲಿ, ಫೆಬ್ರವರಿ 1997ರಲ್ಲಿ ನಡೆದ 17ನೇ ರಾಜ್ಯ ಮಟ್ಟದ ಏಕ ಗವಾಕ್ಷಿ ಸಮಿತಿ ಸಭೆಯ ಅನುಮೋದನೆಯಂತೆ 2500 ಟಿ.ಸಿ.ಡಿ. ಹೊಸ ಸಕ್ಕರೆ ಕಾರ್ಖಾನೆಯನ್ನು ಸಹ ವಿದ್ಯುತ್ ಉತ್ಪಾದನಾ ಘಟಕದೊಂದಿಗೆ ಸ್ಥಾಪನೆ ಮಾಡಿರುತ್ತಾರೆ. ಈ ಕಾರ್ಖಾನೆಯು ಭಾರತ ಸರ್ಕಾರದಿಂದ ಪರವಾನಿಗೆ ಸಂಖ್ಯೆ ಎಲ್ಐ 70/96 ದಿನಾಂಕ 4-3-1996ರಲ್ಲಿ ನೊಂದಾಯಿಸಿರುತ್ತದೆ. ಈ ಘಟಕವು ಕಬ್ಬು ಅರೆಯುವುದನ್ನು ದಿನಾಂಕ 2-8-1999 ರಿಂದ ಪ್ರಾರಂಭಿಸಿರುತ್ತದೆ. ಈ ಮೇರೆಗೆ ಇವರು ಕಬ್ಬು ಖರೀದಿ ಮೇಲಿನ ತೆರಿಗೆ ಮುಂದೂಡಿಕೆ ಸೌಲಭ್ಯ ಪಡೆಯಲು ಹೊಸ ಘಟಕ ಪ್ರಮಾಣ ಪತ್ರವನ್ನು (New Unit Certificate) ಹಾಗೂ ಕೈಗಾರಿಕಾ ನೀತಿ 1996-2001 ರಂತೆ ಮೊಲಾಸಿಸ್ ಮೇಲೆ ಮಾರಾಟ ತೆರಿಗೆ ವಿನಾಯಿತಿ ಧೃಡೀಕರಣ ಪತ್ರ ನೀಡುವಂತೆ ಕೋರಿರುತ್ತಾರೆ.

ದಿನಾಂಕ 18-11-2000 ರಂದು ನಡೆದ 69ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ಇವರಿಗೆ ಕಬ್ಬು ಖರೀದಿ ಮೇಲಿನ ತೆರಿಗೆಗೆ ಮುಂದೂಡಿಕೆ ಸೌಲಭ್ಯ ಪಡೆಯಲು ಹೊಸ ಘಟಕ ಪ್ರಮಾಣ ಪತ್ರವನ್ನು (New Unit Certificate) ಹಾಗೂ ಕೈಗಾರಿಕಾ ನೀತಿ 1996-2001 ರಂತೆ ಮೊಲಾಸಿಸ್ ಮೇಲೆ ಮಾರಾಟ ತೆರಿಗೆ ವಿನಾಯಿತಿ ಧೃಡೀಕರಣ ಪತ್ರ ನೀಡುವ ಬಗ್ಗೆ ದೀರ್ಘವಾಗಿ ಚರ್ಚಿಸಿದ್ದು, ಯಾವುದೇ ಘಟಕವು ಕಬ್ಬು ಖರೀದಿ ಮೇಲಿನ ತೆರಿಗೆ ಮುಂದೂಡಿಕೆ ಸೌಲಭ್ಯ ಪಡೆದಿದ್ದಲ್ಲಿ, ಆ ಘಟಕಕ್ಕೆ ಉಪ ಉತ್ಪನ್ನಗಳಾದ ಮೊಲಾಸಿಸ್, ಬಗ್ಯಾಸೆ ಮತ್ತು ಫಿಲ್ಟರ್ ಕೇಕ್‌ಗಳ ಮೇಲೆ ಮಾರಾಟ ತೆರಿಗೆ ವಿನಾಯಿತಿ ಸೌಲಭ್ಯವನ್ನು ನೀಡದಿರಲು ತೀರ್ಮಾನ ತೆಗೆದುಕೊಳ್ಳಲಾಗಿದೆ. ಈ ತೀರ್ಮಾನವನ್ನು ಸದರಿ ಘಟಕಕ್ಕೆ ದಿನಾಂಕ 29-12-2000ರ ನಿರ್ದೇಶನಾಲಯದ ಪತ್ರದಲ್ಲಿ ತಿಳಿಸಲಾಗಿದೆ.

ಮೇಲ್ಕಂಡ ತೀರ್ಮಾನದಂತೆ, ಘಟಕದವರು ಇವರ ಪತ್ರ ದಿನಾಂಕ 12-7-2001ರಲ್ಲಿ ಉಪ ಉತ್ಪನ್ನವಾದ ಮೊಲಾಸಿಸ್ ಮೇಲೆ ಮಾರಾಟ ತೆರಿಗೆ ವಿನಾಯಿತಿ ಸೌಲಭ್ಯವನ್ನು ಪಡೆಯಲು ಅರ್ಜಿ ಸಲ್ಲಿಸುವುದಿಲ್ಲವೆಂಬುದಾಗಿ ಹೇಳಿಕೆ ನೀಡಿರುತ್ತಾರೆ. ಒಂದು ವೇಳೆ ಇತರೆ ಸಕ್ಕರೆ ಕಾರ್ಖಾನೆಗಳಿಗೆ ಮಾರಾಟ ತೆರಿಗೆ ವಿನಾಯಿತಿಯನ್ನು ಉಪ ಉತ್ಪನ್ನದ (ಮೊಲಾಸಿಸ್) ಮೇಲೆ ನೀಡಿದಲ್ಲಿ, ಈ ಸೌಲಭ್ಯವನ್ನು ಸದರಿ ಘಟಕಕ್ಕೂ ನೀಡಲು ತಿಳಿಸಿರುತ್ತಾರೆ. ಇವರ ಕೋರಿಕೆಯಂತೆ ಸದರಿ ಘಟಕಕ್ಕೆ ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಿಕೊಳ್ಳುವ ಬಗ್ಗೆ ಪತ್ರ ಸಂಖ್ಯೆ: ಐಡಿಎಲ್/ಇ5/214/ಐಸಿಎಲ್/ಎನ್.ಯು.ಸಿ/2001-02, ದಿನಾಂಕ 18-7-2001ರಲ್ಲಿ ಹೊಸ ಘಟಕ ಪ್ರಮಾಣ ಪತ್ರವನ್ನು (New Unit Certificate) ನೀಡಲಾಗಿದೆ.

ಮುಂದುವರೆದಂತೆ, ಸದರಿ ಘಟಕವು ಇವರ ಪತ್ರ ದಿನಾಂಕ 31-1-2001 ರಂದು ಸರ್ಕಾರಕ್ಕೆ ನೀಡಿದ್ದ ಮನವಿಯ ಮೇರೆಗೆ ಸರ್ಕಾರವು ಪತ್ರ ದಿನಾಂಕ 27-3-2002ರಲ್ಲಿ ಉಪ ಉತ್ಪನ್ನಗಳಾದ ಮೊಲಾಸಿಸ್ ಮತ್ತು ಬಗ್ಯಾಸೆಗಳ ಮೇಲೆ ಮಾರಾಟ ತೆರಿಗೆ ವಿನಾಯಿತಿ ಸೌಲಭ್ಯವನ್ನು ನೀಡಲು ಸಾಧ್ಯವಿಲ್ಲವೆಂಬುದಾಗಿ ಘಟಕಕ್ಕೆ ತಿಳಿಸಿರುತ್ತಾರೆ.

ಮುಂದುವರೆದಂತೆ, ವಾಣಿಜ್ಯ ತೆರಿಗೆ ಇಲಾಖೆಯವರು, ಘಟಕದ ಉಪ ಉತ್ಪನ್ನವಾದ ಮೊಲಾಸಿಸ್ ಮಾರಾಟದ ಮೇಲಿನ ತೆರಿಗೆ ವಸೂಲಿ ಬಗ್ಗೆ ಕಾನೂನು ರೀತಿ ಕ್ರಮ ವಹಿಸಿದ್ದರ ಮೇರೆಗೆ, ಸದರಿ ಘಟಕವು ಗೌ: ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 32700-32702/2002 ರಲ್ಲಿ ದಾವೆ ಹೂಡಿದ್ದು, ದಾವೆಯ ಬಗ್ಗೆ ಗೌ: ಉಚ್ಚ ನ್ಯಾಯಾಲಯವು ದೀರ್ಘವಾಗಿ ಚರ್ಚಿಸಿದ್ದು, ದಿನಾಂಕ 8-7-2003ರ ಆದೇಶದಲ್ಲಿ ನಿರ್ದೇಶನಾಲಯದ ಪತ್ರ ದಿನಾಂಕ 29-12-2000 ಮತ್ತು ಸರ್ಕಾರದ ಪತ್ರ ದಿನಾಂಕ 27-3-2002ರಲ್ಲಿ ಘಟಕಕ್ಕೆ ನೀಡಿರುವ ಆದೇಶಗಳನ್ನು set aside ಮಾಡಲಾಗಿದ್ದು, ಸರ್ಕಾರ ಮತ್ತು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯು ಸದರಿ ಘಟಕದವರ ಮನವಿಯನ್ನು ಕಾನೂನು ರೀತ್ಯ ಪರಿಶೀಲಿಸಿ Speaking Order ಹೊರಡಿಸಲು ಆದೇಶಿಸಿರುತ್ತದೆ. ಇದೇ ರೀತಿ ಗೌ: ಉಚ್ಚ ನ್ಯಾಯಾಲಯದ ಆದೇಶ ದಿನಾಂಕ 15-10-2003ರಲ್ಲಿ ಮುಂದುವರೆದ ಆದೇಶದಂತೆ 8 (ಎಂಟು) ವಾರಗಳ ಅವಧಿಯೊಳಗೆ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆರವರು ಘಟಕಕ್ಕೆ ಸಂಬಂಧಿಸಿರುವ ಬಾಕಿ ಇರುವ ಎಲ್ಲಾ ಅರ್ಜಿಗಳನ್ನು ವಿಲೇ ಮಾಡುವಂತೆ ಸೂಚಿಸಿರುತ್ತಾರೆ.

ದಿನಾಂಕ 26-2-2004 ರಂದು ನಡೆದ 79ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ಗೌ: ಉಚ್ಚ ನ್ಯಾಯಾಲಯ ಆದೇಶ ದಿನಾಂಕ 8-7-2003 ರಂತೆ ಸದರಿ ಘಟಕದ ಮನವಿಯನ್ನು ಮರು ಪರಿಶೀಲಿಸಿ, ಸದರಿ ಘಟಕಕ್ಕೆ ಖರೀದಿ ತೆರಿಗೆ ಮುಂದೂಡಿಕೆ ಸೌಲಭ್ಯ ಹಾಗೂ ಮಾರಾಟ ತೆರಿಗೆ ವಿನಾಯಿತಿ ನೀಡುವುದು ದ್ವಿವಳಿ ಪ್ರಯೋಜನವಾಗುವುದರಿಂದ (ಡೂಪ್ಲಿಕೇಷನ್) ಮಾರಾಟ ತೆರಿಗೆ ವಿನಾಯಿತಿ ಸೌಲಭ್ಯ ನೀಡಲು

ಸಾಧ್ಯವಿಲ್ಲವೆಂಬುದಾಗಿ ತೀರ್ಮಾನಿಸಿರುತ್ತದೆ. ಈ ತೀರ್ಮಾನವನ್ನು ದಿನಾಂಕ 15–3–2004ರಲ್ಲಿ ಸರ್ಕಾರಿ ವಕೀಲರಿಗೆ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ. ಸರ್ಕಾರವು ಸಹ ಈ ತೀರ್ಮಾನದಂತೆ ಘಟಕಕ್ಕೆ ದಿನಾಂಕ 2–12–2004 ರಂದು ಹಿಂಬರಹ ನೀಡಿರುತ್ತದೆ.

ಮುಂದುವರೆದಂತೆ, ಸದರಿ ಘಟಕವು ಮೇಲ್ಕಂಡ ಹಿಂಬರಹದ ಹಿನ್ನೆಲೆಯಲ್ಲಿ ರಿಟ್ ಅರ್ಜಿ ಸಂಖ್ಯೆ: 25401–504/2004ರಲ್ಲಿ ಗೌ: ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ಗೌ: ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಹಿನ್ನೆಲೆಯಲ್ಲಿ ದೀರ್ಘವಾಗಿ ಚರ್ಚಿಸಿದ್ದು, ದಿನಾಂಕ 30–9–2011ರಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

> In the Circumstances, whether the concession/deferment of purchase tax vis-à-vis the exemption on payment of sales tax on by-products would amount to double benefit has to be discussed by the State Level Committee once again and take appropriate decision according to law. In that context, the impugned order passed by the State Level Committee refusing exemption sought by the petitioner is quashed. Matter is remitted to the State Level Committee to analyze the fact situation i.e concession shown by the Government policy on payment of purchase tax and on payment of sales tax exemption on by-products and take a decision within three months from the date of receipt of this order. However the assessment orders if any, passed would be subject to the result of the decision that would be taken by the State Level Committee once again or else by the appellate authority. Till a decision is taken by the Committee, there shall be a stay on enforcement of payment of tax as assessed in the impugned orders.

ಮೇಲ್ಕಂಡ ಗೌ: ಉಚ್ಚ ನ್ಯಾಯಾಲಯದ ಆದೇಶ ದಿನಾಂಕ 30–9–2011 ರನ್ವಯ, ದಿನಾಂಕ 11–01–2012 ರಂದು ನಡೆದ 106ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ಚರ್ಚಿಸಲಾಗಿದ್ದು, ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳುವ ಮುನ್ನ ಮುಂದಿನ ಸಭೆಯಲ್ಲಿ ಸದರಿ ಘಟಕದ ಪ್ರತಿನಿಧಿಗಳು ಹಾಜರಾಗಿ ಸಭೆಗೆ ಲಿಖಿತ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಿ ನಂತರ ಈ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ತೀರ್ಮಾನಿಸಲಾಯಿತು.

ಮೇಲ್ಕಂಡಂತೆ ಸದರಿ ವಿಷಯವನ್ನು ದಿನಾಂಕ 23–02–2012 ರಂದು ನಡೆದ 107ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ಘಟಕದ ಪ್ರತಿನಿಧಿಗಳಿಂದ ಲಿಖಿತ ಹೇಳಿಕೆಯನ್ನು ಪಡೆದು ಚರ್ಚಿಸಿದ್ದು, ಅವರಿಗೆ 1996–2001ರ ಕೈಗಾರಿಕಾ ನೀತಿಯಂತೆ, ಬೈ–ಪ್ರಾಡಕ್ಟ್ಸ್ ಮಾರಾಟಗಳ ಮೇಲೆ ಅವರು ಉತ್ಪಾದನೆ ಮಾಡಿದ ದಿನಾಂಕದಿಂದ ಮಾರಾಟ ತೆರಿಗೆ ವಿನಾಯಿತಿ ಪರಿಗಣಿಸಲು ಕೋರಿರುವ ಮನವಿಯ ಬಗ್ಗೆ ಇನ್ನು ಹೆಚ್ಚುವರಿ ದಾಖಲಾತಿಗಳು ಏನಾದರೂ ಇದ್ದಲ್ಲಿ ಅವುಗಳನ್ನು ಸಹ ಸಲ್ಲಿಸಲು ದಿನಾಂಕ 03–03–2012ರವರೆಗೆ ಕಾಲಾವಕಾಶವನ್ನು ನೀಡಲು ಹಾಗೂ ಅಂತಿಮ ತೀರ್ಮಾನ ತೆಗೆದುಕೊಳ್ಳಲು 31–3–2012ರವರೆಗೂ ಕಾಲಾವಕಾಶವನ್ನು ನೀಡುವಂತೆ ಗೌ: ಉಚ್ಚ ನ್ಯಾಯಾಲಯಕ್ಕೆ ಮನವಿ ಸಲ್ಲಿಸಲು ತೀರ್ಮಾನಿಸಲಾಗಿತ್ತು. ಗೌ: ಉಚ್ಚ ನ್ಯಾಯಾಲಯಕ್ಕೆ ಕಾಲಾವಕಾಶ ಕೋರಿ ಮನವಿ ಸಲ್ಲಿಸಿದ್ದು, ಈ ಸಂಬಂಧ ಘಟಕದ ರಿಟ್ ಅರ್ಜಿ ಸಂಖ್ಯೆ 24501/2004ಗೆ ಪ್ರಕರಣಕ್ಕೆ ಸಂಬಂಧಿಸಿದಂತೆ, ಗೌ: ಉಚ್ಚ ನ್ಯಾಯಾಲಯವು ದಿನಾಂಕ 03–03–2012ರ ಆದೇಶದಲ್ಲಿ ಈ ಘಟಕವು ಕಬ್ಬು ಖರೀದಿ ತೆರಿಗೆ ಮುಂದೂಡಿಕೆ ಹಾಗೂ ಕೈಗಾರಿಕಾ ನೀತಿಯಂತೆ ಬೈ–ಪ್ರಾಡಕ್ಟ್ಸ್‌ಗಳಿಗೆ ಮಾರಾಟ ತೆರಿಗೆ ವಿನಾಯಿತಿ ನೀಡುವ ಬಗ್ಗೆ ಪರಿಶೀಲಿಸಿ, ಅಂತಿಮ ತೀರ್ಮಾನ ತೆಗೆದುಕೊಳ್ಳಲು ರಾಜ್ಯ ಸಮನ್ವಯ ಸಮಿತಿಗೆ ಹೆಚ್ಚುವರಿ ಮೂರು ತಿಂಗಳ ಕಾಲಾವಕಾಶ ನೀಡಿರುತ್ತದೆ. ಸದರಿ ಘಟಕದವರು ದಿನಾಂಕ 03–03–2012ರಂದು ಮಾರಾಟ ತೆರಿಗೆ ವಿನಾಯಿತಿ ಸಂಬಂಧ ಕೆಲವು ಹೆಚ್ಚುವರಿ ವಿವರಣೆಯನ್ನು ಹಾಗೂ ದಾಖಲಾತಿಗಳನ್ನು ನಿರ್ದೇಶನಾಲಯಕ್ಕೆ ಸಲ್ಲಿಸಿ, ಈ ಘಟಕಕ್ಕೆ 1996ರ ಕೈಗಾರಿಕಾ ನೀತಿಯನ್ವಯ ಮಾರಾಟ ತೆರಿಗೆ ಸೌಲಭ್ಯವನ್ನು ಕೋರಿ ಮನವಿ ಸಲ್ಲಿಸಿ ಕೆಳಕಂಡಂತೆ ತಿಳಿಸಿರುತ್ತಾರೆ.

- ದಿನಾಂಕ 1–8–1997 ರಲ್ಲಿ ಹೊರಡಿಸಿರುವ ಸರ್ಕಾರಿ ಆದೇಶ ಸಂಖ್ಯೆ: ಸಿಐ/254/ಎಸ್.ಪಿ.ಸಿ./96 ರಲ್ಲಿ ಸಕ್ಕರೆ ಕಾರ್ಖಾನೆಗಳಿಗೆ ವಿಸ್ತರಣೆ/ಆಧುನೀಕರಣ/ವೈವಿದ್ದೀಕರಣ ಯೋಜನೆಗಳಿಗೂ ಕಬ್ಬು ಖರೀದಿ ಮೇಲಿನ ತೆರಿಗೆ ಮುಂದೂಡಿಕೆ ಸೌಲಭ್ಯ ವಿಸ್ತರಿಸಲಾಗಿದ್ದು, ಇದರಲ್ಲಿ ಕೈಗಾರಿಕಾ ನೀತಿ 1996–2001ರ ಕೈಗಾರಿಕಾ ನೀತಿಯಂತೆ ಸಕ್ಕರೆ ಕಾರ್ಖಾನೆಗಳನ್ನು ಸವಲತ್ತು "ಥಸ್ಟ್ ಸೆಕ್ಟರ್" (Thrust Sector) ಎಂಬುದಾಗಿ ಪರಿಗಣಿಸಿದ್ದು, ಇದರಂತೆ ಇವರಿಗೆ Purchase Tax & Sales Tax ಸೌಲಭ್ಯ ಪಡೆಯಲು ಅರ್ಹತೆ ಇರುವುದಾಗಿ ತಿಳಿಸಿರುತ್ತಾರೆ.
- ಮೆ: ಕಲ್ಯಾಣಿ ಫೆರಸ್ ಇಂಡಸ್ಟ್ರೀಸ್ ಲಿ., ರವರಿಗೆ ಸರ್ಕಾರವು Purchase Tax & Sales Tax ವಿನಾಯಿತಿ ಸೌಲಭ್ಯಗಳನ್ನು ನೀಡಿ ಅಧಿಸೂಚನೆ ಹೊರಡಿಸಿರುವುದರಿಂದ, ಸಕ್ಕರೆ ಕಾರ್ಖಾನೆಗಳಿಗೆ Purchase Tax & Sales Tax ಸೌಲಭ್ಯ ನೀಡುವುದು ಡೂಪ್ಲಿಕೇಷನ್ ಆಗುವುದಿಲ್ಲವೆಂಬುದಾಗಿ ತಿಳಿಸಿರುತ್ತಾರೆ.
- ವಾಣಿಜ್ಯ ತೆರಿಗೆ ಇಲಾಖೆಯವರು ಗ್ರೌಂಡ್‌ನಟ್ ಆಯಿಲ್ ಮತ್ತು ಅಕ್ಕಿ ಗಿರಣಿಗಳ ವಿರುದ್ಧ Purchase Tax & Sales Tax ಗಳಿಗೆ ಸಂಬಂಧಿಸಿದಂತೆ ಹೂಡಿದ್ದ ಅಪೀಲ್ ಪ್ರಕರಣಗಳ್ನನು ಗೌ: ಉಚ್ಚ ನ್ಯಾಯಾಲಯವು ತಿರಸ್ಕರಿಸಿರುವ ಆದೇಶದ ಪ್ರತಿಗಳನ್ನು ಲಗತ್ತಿಸಿರುತ್ತಾರೆ.
- ಸದರಿ ಘಟಕವು ಡಿಸ್ಟಿಲರಿ ಹೊಂದಿಲ್ಲದ ಕಾರಣ, ಮೊಲಾಸಿಸ್‌ನ್ನು ಮಾರಾಟ ಮಾಡಿರುತ್ತದೆ. ಇದೇ ರೀತಿ ಇದ್ದ ಮೆ: ಚಾಮುಂಡೇಶ್ವರಿ ಶುಗರ್ಸ್, ಮದ್ದೂರು ತಾಲ್ಲೂಕು ಇವರಿಗೆ ಮಾರಾಟ ತೆರಿಗೆ ಸೌಲಭ್ಯ ನೀಡಿರುವುದಾಗಿ ತಿಳಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳ ಬಗ್ಗೆ ದಿನಾಂಕ 27–3–2012ರ 108ನೇ ಸಭೆಯಲ್ಲಿ ಚರ್ಚಿಸಲಾಗಿರುತ್ತದೆ. ಘಟಕದವರು ಸಲಿಸಿರುವ ವಿವರಣೆಯನ್ನು ಹಾಗೂ ದಾಖಲಾತಿಗಳನ್ನು ಪರಿಶೀಲಿಸಿ ಹಾಗೂ ಈಗಾಗಲೇ 69 ಮತ್ತು 79ನೇ ರಾಜ್ಯ ಮಟ್ಟದ ಎಸ್.ಎಲ್.ಸಿ.ಸಿ. ಸಭೆಗಳಲ್ಲಿ ತೆಗೆದುಕೊಂಡ ತೀರ್ಮಾನಗಳನ್ನು ಮರುಪರಿಶೀಲಿಸಿ ಕಬ್ಬು ಖರೀದಿ ತೆರಿಗೆ ಮುಂದೂಡಿಕೆ ಹಾಗೂ ಕೈಗಾರಿಕಾ ನೀತಿಯಂತೆ ಬೈ–ಪ್ರಾಡಕ್ಟ್‌ಗಳಿಗೆ ಮಾರಾಟ ತೆರಿಗೆ ವಿನಾಯಿತಿ ನೀಡುವುದು ದ್ವಿವಳಿ ಪ್ರಯೋಜನ (Double benefit) ಆಗುವುದೇ ಎಂಬ ಬಗ್ಗೆ ಕಾನೂನು ಇಲಾಖೆಯಿಂದ ಅಭಿಪ್ರಾಯ ಪಡೆಯಲು Terms of Reference ಸಿದ್ದಪಡಿಸುವ ಕುರಿತು ಹೆಚ್ಚುವರಿ ವಾಣಿಜ್ಯ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ ಹಾಗೂ ನಿರ್ದೇಶಕರು (ತಾಂತ್ರಿಕ ಕೋಶ), ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಈ ಅಧಿಕಾರಿಗಳನ್ನೊಳಗೊಂಡ ಉಪ ಸಮಿತಿಯನ್ನು ರಚಿಸಿ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ರವರ ಅನುಮೋದನೆಯೊಂದಿಗೆ ಕಾನೂನು ಇಲಾಖೆಯ ಅಭಿಪ್ರಾಯ ಪಡೆದು ಮುಂದಿನ ಎಸ್.ಎಲ್.ಸಿ.ಸಿ. ಸಭೆಗೆ ಮಂಡಿಸಲು ತೀರ್ಮಾನಿಸಿತು, ಇದರಂತೆ ಕಾನೂನು ಇಲಾಖೆಯ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತದೆ.

| **Terms of References of sub-committee:-** | **Sub-committee Opinion of Law Department (109):-** |
|---|---|
| 1. Whether the grant of sugar-cane purchase tax deferral facility as per G.O.s of 1973, 1985 and 1997 and grant of sales tax exemption facility on finished products/by-products as per industrial Policy 1996-01 amount to duplication of incentives? | ಅಂಶ 1ರಲ್ಲಿ ಆಡಳಿತ ಇಲಾಖೆಯು, ರಾಜ್ಯ ಸರ್ಕಾರವು 1973, 1985 ಮತ್ತು 1997ರ ಸರ್ಕಾರಿ ಆದೇಶದನ್ವಯ ಕಬ್ಬು ಖರೀದಿ ತೆರಿಗೆ ಮುಂದೂಡಿಕೆಗೆ ಆದೇಶ ನೀಡಿರುತ್ತದೆ ಮತ್ತು 1996–2001ರ ಕೈಗಾರಿಕಾ ನೀತಿಯಂತೆ ಮೆ: ಐ.ಸಿ.ಎಲ್. ಷುಗರ್ಸ್ ಲಿ, ರವರ By-Product ಮಾರಾಟ ತೆರಿಗೆ ವಿನಾಯಿತಿ ನೀಡಿರುವುದು Double-Benefit ಆಗುತ್ತದೆಯೇ ಎಂಬ ಬಗ್ಗೆ 1996–2001 ಕೈಗಾರಿಕಾ ನೀತಿಯನ್ನು ಪರಿಶೀಲಿಸಿದಾಗ, ರಾಜ್ಯ ಸರ್ಕಾರವು ಕ್ರಮ ಸಂಖ್ಯೆ: 5 ರಲ್ಲಿ ಮಾರಾಟ ತೆರಿಗೆ ವಿನಾಯಿತಿಯನ್ನು ಘೋಷಣೆ ಮಾಡಿರುತ್ತದೆ. ಆದರೆ, ಮಾರಾಟ ತೆರಿಗೆ ವಿನಾಯಿತಿ ಪಡೆಯಲು ಕಬ್ಬು ಖರೀದಿ ತೆರಿಗೆ ಮುಂದೂಡಿಕೆಗೆ ಅನುಮತಿ ನೀಡಿರುವ ಘಟಕಗಳಿಗೆ ಮಾರಾಟ ತೆರಿಗೆ ವಿನಾಯಿತಿ ಪಡೆಯಲು ಸಾಧ್ಯವಿಲ್ಲ ಅಥವಾ ಮಾರಾಟ ತೆರಿಗೆ ವಿನಾಯಿತಿ ಅನ್ವಯವಾಗುವುದಿಲ್ಲವೆಂದು ಸ್ಪಷ್ಟಪಡಿಸಿರುವುದಿಲ್ಲ. ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 24501/2004ರಲ್ಲಿ ದಿನಾಂಕ 30–09–2011ರಂದು ಆದೇಶ ನೀಡಿದ್ದು ಆದೇಶದ ಪುಟ ಸಂಖ್ಯೆ: 24ರಲ್ಲಿ, "In my opinion deferment of the payment of purchase tax and treating it as interest free loan to be remitted to the Government thereafter within stipulated time of 5 years would not be total exemption but only is a concession" ಎಂದು ಸ್ಪಷ್ಟಪಡಿಸಿರುತ್ತದೆ. ನ್ಯಾಯಾಲಯದ ಆದೇಶ, ಕೈಗಾರಿಕಾ ನೀತಿ ಹಾಗೂ ಕಬ್ಬು ಖರೀದಿ ತೆರಿಗೆ ಮುಂದೂಡಿಕೆ ಬಗ್ಗೆ ರಾಜ್ಯ ಸಮನ್ವಯ ಸಮಿತಿಯು ಹೊರಡಿಸಿರುವ ಆದೇಶ ಮತ್ತು ಚರ್ಚೆಯ ಅಂಶಗಳನ್ನು ಪರಿಶೀಲಿಸಿದಾಗ, ಕಬ್ಬು ಮಾರಾಟ ತೆರಿಗೆ ಮುಂದೂಡಿಕೆಯನ್ನು ರಾಜ್ಯ ಸಮನ್ವಯ ಸಮಿತಿ ಅಥವಾ ಆಡಳಿತ ಇಲಾಖೆಯ ಪೂರ್ಣ ವಿನಾಯಿತಿ (Total Exemption ಎಂದು ಪರಿಗಣಿಸುತ್ತದೆಯೇ ಅಥವಾ Incentive/Concession ಎಂದು ಪರಿಗಣಿಸುತ್ತದೆಯೇ ಎಂಬ ಅಂಶದ ಆಧಾರದ ಮೇಲೆ ಮಾರಾಟ ತೆರಿಗೆ ವಿನಾಯಿತಿ ನೀಡುವುದು (Double Benefit) ಆಗುತ್ತದೆಯೇ ಅಥವಾ ಇಲ್ಲವೆ ಎಂದು ಪರಿಶೀಲಿಸಿ, ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ರಾಜ್ಯ ಸಮನ್ವಯ ಸಮಿತಿಯ ಕಬ್ಬು ಖರೀದಿ ತೆರಿಗೆ ಮುಂದೂಡಿಕೆಯನ್ನು ಕೇವಲ Incentive ಅಥವಾ Meager Concession ಎಂದು ಪರಿಗಣಿಸಿದಲ್ಲಿ, ಮಾರಾಟ ತೆರಿಗೆ ವಿನಾಯಿತಿಯನ್ನು By product ಗಳಿಗೆ ನೀಡುವುದು Double Benefit ಆಗುವುದಿಲ್ಲ. ಕಬ್ಬು ಖರೀದಿ ತೆರಿಗೆ ಮುಂದೂಡಿಕೆಯನ್ನು Total Exemption ಎಂದು ರಾಜ್ಯ ಸಮನ್ವಯ ಸಮಿತಿಯು ಆಡಳಿತಾತ್ಮಕವಾಗಿ ಪರಿಶೀಲಿಸಿ, ಪರಿಗಣಿಸಿದಲ್ಲಿ, By product ಗಳಿಗೆ ನೀಡುವ ಮಾರಾಟ ತೆರಿಗೆ ವಿನಾಯಿತಿಯು Double Benefit ಆಗುತ್ತದೆ ಎಂದು ಪರಿಗಣಿಸಬೇಕಾಗುತ್ತದೆ.<br>ಆಡಳಿತ ಇಲಾಖೆಯು ಕಬ್ಬು ಖರೀದಿ ತೆರಿಗೆ ಮುಂದೂಡಿಕೆಯನ್ನು ಯಾವ ರೀತಿಯಲ್ಲಿ ಅರ್ಥೈಸುತ್ತದೆಯೋ ಅದರ ಆಧಾರದ ಮೇಲೆ ಮಾರಾಟ ತೆರಿಗೆ ವಿನಾಯಿತಿ Double Benefit ಆಗುತ್ತದೆ ಅಥವಾ ಇಲ್ಲವೆಂದು ತೀರ್ಮಾನಿಸಬೇಕಾಗುತ್ತದೆ. ಕಬ್ಬು ಖರೀದಿ ತೆರಿಗೆ ಪಾವತಿ ಮಾಡುವುದನ್ನು ನಿಗದಿತ ಸಮಯದವರೆಗೆ ಮುಂದೂಡಿದಲ್ಲಿ, ಸದರಿ ಅವಧಿಯಲ್ಲಿ **ಮೆ: ಐ.ಸಿ.ಎಲ್. ಷುಗರ್ಸ್ ಲಿ.,** ರವರಿಗೆ ಯಾವ ಪ್ರಮಾಣದಲ್ಲಿ ಆರ್ಥಿಕ ಪ್ರಯೋಜನ ಪಡೆಯುತ್ತಾರೆ ಎಂಬುದನ್ನು ಪರಿಶೀಲಿಸಿ, ಆಡಳಿತ ಇಲಾಖೆಯು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. **ಮೆ: ಐ.ಸಿ.ಎಲ್. ಷುಗರ್ಸ್ ಲಿ.,** ರವರಿಗೆ ಹೆಚ್ಚಿನ ಆರ್ಥಿಕ ಪ್ರಯೋಜನ ಉಂಟಾದಲ್ಲಿ ಸದರಿ ಆರ್ಥಿಕ ಪ್ರಯೋಜನವನ್ನು ರಾಜ್ಯ ಸಮನ್ವಯ ಸಮಿತಿಯು ಮಾರಾಟ ತೆರಿಗೆ ವಿನಾಯಿತಿಯನ್ನು ನೀಡಿದಲ್ಲಿ Double Benefit ಎಂದು ತೀರ್ಮಾನಿಸಬಹುದು. |

| | | |
|---|---|---|
| 2. | Whether Govt., can reject the sales tax exemption facility to M/s. ICL Sugars on the finished products, in view of the availment of sugar-cane purchase tax? | ಆಡಳಿತ ಇಲಾಖೆಯು ಅಂಶ 1 ರಲ್ಲಿ ನಮೂದು ಮಾಡಿರುವಂತೆ ಕಬ್ಬು ಖರೀದಿ ತೆರಿಗೆ ಮುಂದೂಡಿಕೆಯನ್ನು ವಿನಾಯಿತಿ ಎಂದು ಪರಿಗಣಿಸಿದಲ್ಲಿ ಮಾರಾಟ ತೆರಿಗೆ ವಿನಾಯಿತಿ ನೀಡುವುದನ್ನು Double Benefit ಎಂದು ಪರಿಗಣಿಸಿ, ತಿರಸ್ಕರಿಸಬಹುದಾಗಿರುತ್ತದೆ. |
| 3. | Can the Government extend sales tax exemption facility to M/s. ICL Sugars on the sale of finished products and byproducts as per the Industrial Policy 1996-01 in addition to purchase tax deferment facility on account of sugarcane purchase? | 1996–2001ರ ಕೈಗಾರಿಕಾ ನೀತಿಯನ್ನು ಪರಿಶೀಲಿಸಿದಾಗ, ಕಬ್ಬು ಖರೀದಿ ತೆರಿಗೆ ಮುಂದೂಡಿಕೆಯನ್ನು **ಮೆ: ಐ.ಸಿ.ಎಲ್. ಷುಗರ್ಸ್ ಲಿ.,** ಅಥವಾ ಬೇರೆ ಯಾವುದೇ ಕಾರ್ಖಾನೆಯವರಿಗೆ ನೀಡಿದಲ್ಲಿ, ಅಂತಹ ಕಾರ್ಖಾನೆಗಳ Products ಮತ್ತು By product ಗಳಿಗೆ ಮಾರಾಟ ತೆರಿಗೆ ವಿನಾಯಿತಿಯನ್ನು ನೀಡಬಾರದು ಎಂದು ಸರ್ಕಾರಿ ಅದೇಶ ಹೊರಡಿಸಿರುವುದಿಲ್ಲ. ಅಂಶ 1ರ ಆಧಾರದಲ್ಲಿ ಆಡಳಿತ ಇಲಾಖೆಯು ಕಬ್ಬು ಖರೀದಿ ತೆರಿಗೆ ಮುಂದೂಡಿಕೆಯನ್ನು ವಿನಾಯಿತಿ ಎಂದು ಪರಿಗಣಿಸಿದರೆ ಮಾತ್ರ ಹಾಗೂ ಕಬ್ಬು ಖರೀದಿ ತೆರಿಗೆ ಮುಂದೂಡಿಕೆಯಿಂದ **ಮೆ: ಐ.ಸಿ.ಎಲ್. ಷುಗರ್ಸ್ ಲಿ.,** ರವರಿಗೆ ಹೆಚ್ಚಿನ ಆರ್ಥಿಕ ಲಾಭ ಉಂಟಾಗಿದೆ ಎಂದು ತೀರ್ಮಾನ ಪಡಿಸಿದಲ್ಲಿ ಮಾತ್ರ Products ಮತ್ತು By-Products ಗಳ ಮೇಲೆ ಮಾರಾಟ ತೆರಿಗೆ ವಿನಾಯಿತಿಯನ್ನು ನೀಡಬಹುದಾಗಿರುತ್ತದೆ. ಕಬ್ಬು ಖರೀದಿ ತೆರಿಗೆ ಮುಂದೂಡಿಕೆಯನ್ನು ವಿನಾಯಿತಿ ಎಂದು ಪರಿಗಣಿಸದೇ ಇದ್ದಲ್ಲಿ, ಮೆ: ಐ.ಸಿ.ಎಲ್. ಷುಗರ್ಸ್ ಲಿ., ರವರ Finished Products ಮತ್ತು By-Products ಗಳ ಮಾರಾಟದ ಮೇಲೆ ಮಾರಾಟ ತೆರಿಗೆ ವಿನಾಯಿತಿಯನ್ನು ನೀಡಬಹುದಾಗಿರುತ್ತದೆ.<br>"ಅಂಶ 1ಕ್ಕೆ ಆಡಳಿತ ಇಲಾಖೆಯು ಯಾವ ರೀತಿಯಲ್ಲಿ ಅರ್ಥೈಸಿ ತೀರ್ಮಾನ ತೆಗೆದುಕೊಳ್ಳುತ್ತದೆಯೋ, ಅದರ ಆಧಾರದ ಮೇಲೆ ಮಾರಾಟ ತೆರಿಗೆ ವಿನಾಯಿತಿ ನೀಡಬೇಕೆ ಅಥವಾ ಇಲ್ಲವೆ ಎಂದು ತೀರ್ಮಾನಿಸಬೇಕಾಗುತ್ತದೆ. |

ಮೇಲ್ಕಂಡಂತೆ, ದಿನಾಂಕ 16–05–2012ರಂದು ನಡೆದ 109ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ದೀರ್ಘವಾಗಿ ಚರ್ಚಿಸಿದ್ದು, ಕೆಳಕಂಡಂತೆ ಅಭಿಪ್ರಾಯ ಪಡೆಯಲಾಯಿತು.

a) There is nil sales tax on sugar. Therefore in order to give incentives to sugar industries the Government came out with a scheme in 1973. As per this scheme the sugar industries were given concession on the purchase side as purchase tax was levied on the purchase of sugarcane. The concession given was that the sugar factory would have to pay the purchase tax after 10 years without any interest. It needs to be noted that as there was/is Nil sales tax on sale of sugar, therefore the concession was given on the purchase side. The Government order of 1973 did not extend any concession/exemption on the sales side of the industry. A large number of sugar factories have been given benefits since 1973 and uniformly the benefit has been confined to the purchase tax only. The Government has been consistent in its policies and has not extended the benefit on sales on by-products to any sugar unit. Right from the 1973 to 31-12-1999, the department of Industries and Commerce, was extending Tax based incentives to Industrial units (Excluding Sugar Industries) in accordance with Industrial Policies (1973, 1982, 1985, 1990 and 1996), and Purchase Tax Deferment benefit to Sugar Industries through separate Govt. Orders (1973, 1985 etc.,) and accordingly no Sugar Industries were allowed to enjoy the benefit of Sales Tax Exemption/Deferment, on the products/by-products as per the Industrial Policies. Therefore, extending Sales Tax Benefit to M/s. ICL Sugar Industry would amount to a deviation from the consistent policy followed till now.

b) The SLCC also deliberated and noted that the benefit extended to sugar factories is more liberal than what is being offered to other industries under the industrial policy. The industrial units are given a deferment of 6 to 8 years only. But in the case of sugar industry as per Government Order of 1973 all units avail a deferment facility of 10 years. Thus the sugar factories get a better package than other industries by virtue of Government Order of 1973 which is a comprehensive scheme. It is further seen that, whereas under industrial policy, there is ceiling for availing deferment of tax to the extent of 100% of value of fixed assets, there is no such ceiling in the case of sugar factories to avail interest free loan equivalent to purchase tax liability.

c) The SLCC also noted that the unit was informed that it would not get the benefit on sale of its by-products. Indeed the unit has given an undertaking to the effect that it will not claim any benefits on the sale of products. Thus the unit has been committed that it would not claim the benefits, it is now agitating to claim it.

d) Knowing very well about their ineligibility for the Sales Tax Exemption on their By-Products, and also without the valid exemption certificate with them, they should have collected the Sales Tax on By-products and remitted to Government in time as per law. But, they have not done so.

e) The most important benefit which an industrial policy gives to a unit is on the sales tax or purchase tax. Therefore these benefits are spelt out in a single policy or notification. Such benefits are given on the throughput of the industry. As the purchase of raw materials, conversion into final product and sale of the products are in one continuous chain, concession to different elements of this chain on the purchase side and sales side are covered in a single order. This is done as different units have different liabilities on purchase and sales of goods. Sugar factory is a case which is totally different from other manufacturing units. There is no tax on sales of sugar. It is the same sugarcane which gets converted into sugar, bagasse and molasses. Also giving concession on by-products like molasses and bagasse would have difficulties. The bagasse is consumed in the factory itself for use as fuel in heating the boilers or in the cogeneration plants. Similarly, some sugar factories may consume molasses in their distillery units, the products of which are not given any incentives. With all this in mind the sugar factories were covered by the 1973 Government Order.

f) Thus the grant of benefit on sale of by-products would amount to giving unintentional extra benefits to the sugar unit as it would lead to concession on the same throughput and in that sense it would lead to duplication as the unit would be claiming benefits under two separate policies.

g) The committee also noted that in the industrial policy the deferment of tax benefit is given for 6 to 8 years. However because of the special situation of sugar industry the deferment is given for 10 years.

h) Benefits can be given to any unit either by way of deferment or by way of exemption. Some industrial units prefer deferment to tax exemption, as they can collect the tax and use it for the period under deferment. Under exemption a unit cannot collect tax separately. As per the estimation done by the Commercial Tax Department, the total Sugar Cane Purchase Tax availed by the unit in a period of 10 years is in the order of Rs. 20,65 Crores and the same is repayable in 05 (five) annual installments. Whereas the Sales Tax Exemption on By-products for the specified period is in the order of Rs. 6.69 Crores. From this it could be noticed that the amount of purchase tax deferment extended is substantially higher than the amount of Sales Tax on By-products and also the Purchase tax deferment benefit is more advantageous than the Sales Tax Exemption benefit. Both tax deferment as well as tax exemption are a cost to the Government and correspondingly are a benefit to industrial unit. In the case of deferment to unit retain the tax collected, uses it and then repays it without interest. In deferment though the amount is repaid it is done after a lapse of several years. The net present value of the repayment is much less than the tax deferred.

i) The committee, keeping in view the decisions of the Hon'ble High Court Order dated 27-3-2012, had detailed deliberations on the above observations and re-examined provisions of the industrial policy as well as Conversion of Sugar Cane Purchase Tax into Interest free loan scheme and also the above legal opinion, the committee has come to a final conclusion based on the reasons given above that the petitioner unit is not eligible for Sales Tax Exemption on their Bye-Products namely., Bagasse and Molasses.

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮೆ: ಐ.ಸಿ.ಎಲ್. ಶುಗರ್ಸ್ ಲಿ., ಇವರು ಕೋರಿರುವ ತೆರಿಗೆ ವಿನಾಯಿತಿಯನ್ನು ನೀಡುವುದು ಸಾಧ್ಯವಿಲ್ಲವೆಂಬುದನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 454 ಎಸ್‌ಪಿಐ 2010, ಬೆಂಗಳೂರು, ದಿನಾಂಕ 30–05–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ: ಐ.ಸಿ.ಎಲ್. ಶುಗರ್ಸ್ ಲಿ., ಮಾಕವಳ್ಳಿ ಗ್ರಾಮ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ ರವರಿಗೆ 1996–2001 ಕೈಗಾರಿಕಾ ನೀತಿಯಂತೆ ಇವರ ಉಪ ಉತ್ಪನ್ನಗಳಾದ ಮೊಲಾಸಿಸ್, ಬಗಾಸೆ ಇತ್ಯಾದಿಗಳ ಮೇಲೆ ಮಾರಾಟ ತೆರಿಗೆ ವಿನಾಯಿತಿ ಪಡೆಯಲು ಅರ್ಹತೆ ಇರುವುದಿಲ್ಲವೆಂಬುದಾಗಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜ್ಯೋತಿ, ಆರ್. ಜೆ**

ಪೀಠಾಧಿಕಾರಿ (ತಾಂತ್ರಿಕ ಕೋಶ)

ಪಿ.ಆರ್. 1682 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## COMMERCE & INDUSTRIES SECRETARIAT

**Sub:** Approval to the Project Proposal of Infosys Limited for change of activity and setting up of IT/ITES SEZ at Bengaluru IT Park, Devanahalli, Bengaluru Rual District.

**Read:** 1) $22^{nd}$ SHLCC meeting held on 24-05-2010
2) Govt. Order No. CI 189 SPI 2010, Dated 02-06-2010
3) Proceedings of the $28^{th}$ State High Level Clearance Committee (SHLCC) meeting held on 23-05-2012.

**Preamble:**

Infosys Limited has proposed to establish a sector specific SEZ for IT/ITES in 40 acres (16.187 hectares) of land at Bengalure IT Park, Devanahalli, Bengaluru Rural District with an investment of Rs. 782 Cr.

The Commissioner for Industries Development & Director for Industries & Commerce has now sent a proposal giving the details of the project cost at the SEZ.

Government has examined the recommendations made by the Commissioner for Industries Development & Director for Industries & Commerce and the proposal in all aspects.

Hence the following Order

**Government Order No. CI 144 SPI 2012 Bangalore, dated 05-06-2012**

Government is pleased to approve the following for the project approved vide Government Order No. CI 189 SPI 2010, Dated 02-06-2010.

I. Change of activity from "Software Development Centre" to "IT SEZ" and
II. Change of name of the company from "M/s Infosys Technologies Ltd., to "M/s Infosys Ltd.,"

By Order and in the name of the Governor of Karnataka
**Jyothi R.J.**
Desk Officer (Technical Cell)
Commerce & Industries Department

P.R. 1683

## COMMERCE & INDUSTRIES SECRETARIAT

**Sub:** Approval to the Project proposal of M/s Prestige Garden Constructions Pvt. Ltd., to establish a "Service Apartment" project at Whitefield, Bangalore-Reg.

**Read:** Proceedings of the $28^{th}$ State High Level Clearance Committee (SHLCC) Meeting held on 23-05-2012.

**Preamble:**

M/s. Prestige Garden Constructions Pvt. Ltd., proposes to establish a "Service Apartment" project at Whitefield, Bangalore with an investment of Rs. 92.88 cr. generating employment to about 135 persons.

In the $28^{th}$ State high Level Clearance Committee (SHLCC) Meeting held on 23-05-2012, the proposal of the Company was discussed and approved.

Government has examined the recommendations made by the State High Level Clearance Committee in the $28^{th}$ Meeting held on 23-05-2012, in all aspects.

Hence the following order

**Government Order No. CI 192 SPI 2012, Bangalore, dated 25-05-2012**

Government is pleased to approve in-principle the proposal of M/s Prestige Garden Constructions Pvt. Ltd., to establish "Service Apartment" project at Whitefield, Bangalore with an investment of Rs. 92.88 cr. generating employment to about 135 persons by extending the infrastructure facilities, incentives & concessions as mentioned below:

**INFRASTRUCTURE FACILITIES:**

1. **Land:** 5 acres of own land at Sy. No. 62, K.R. Puram Hobli, Whitefield Village, Bangalore. The project proponent to take approval from Local Planning Authorities.
2. **Water:** Required water to be met through own sources The Company should have dual piping system in the project.
3. **Power:** 967 KVA to be serviced by BESCOM.
4. **Incentives & Concessions:** As per applicable Industrial Policy of the State

**GENERAL TERMS AND CONDITIONS:**

1. **Environment:** The promoters as to obtain CFE and CFO from KPSCB Environmental Clearance from MOEF, GOI.
2. **Employment:** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka (Dr. Sarojini Mahishi Report). A copy of Human Resources Development plan shall be sent to the Commissioner for I.D. & Director of Industries and Commerce for monitoring.
3. **Vendor Development:** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development:** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others:**
   a) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue of order.

By Order and in the name of the Governor of Karnataka

**Jyothi R.J.**

Desk Officer (Technical Cell)

P.R. 1684 Commerce & Industries Department

## HORTICULTURE SECRETARIAT

**Sub:** "Integrated Farming in Cocoanut for Productivity Improvement Programme"-State Level Administrative Approval for the year 2012-13-reg.

**Read:** 1) G.O. No. ತೋಇ 65 ತೋಯೋಕಾ 2012, dated 05-04-2012
2) Letter of CDB F.No. 223/2012-Dev, dated 30-04-2012
3) Letter of Director of Horticulture No. ತೋಇ/ತೋಜಂನಿ/ತೋಬೆ/ಸತೋಅ–2/02/2012–13, , dated 28-05-2012.

**Preamble:**

The Centrally Sponsored Scheme namely, "Integrated Farming in Coconut for Productivity Improvement Programme" Head of Account 2401-00-108-2-51-100 (Financial Assistance) has been continued during 2012-13 as an ongoing scheme with an outlay of Rs. 750.00 lakhs vide Government Order read at (1) above. The scheme to be implemented as per the guidelines to be issued Coconut Development Board and has a Central share of Rs. 150.00 lakhs and State share of Rs. 600.00 lakhs.

2. Coconut Development Board has conveyed approval for an amount of Rs. 373.991 lakhs for implementing CDB assisted programmes during. 2012-13 vide its letter read at (2) above. The following has been the sharing pattern.

*(Rs. in lakhs)*

| Sl. No. | Agency | State share | CDB share | Total |
|---|---|---|---|---|
| A | Programmes to be implemented by the State Department of Horticulture | 3.125 | 99.375 | 102.500 |
| B | Programmes to be implemented directly by the Coconut development Board | … | 271.491 | 271.491 |
| | **Grand Total** | **3.125** | **370.866** | **373.991** |

3. The Director of Horticulture in the letter read at (3) above has requested the Government to accord State Level Administrative Approval for CDB assisted programmes during 2012-13.

4. The proposal of the Director of Horticulture has been examined and hence this order

**Government Order No. AHD 69 HPP 2012, Bangalore, dated 19-06-2012**

Government is pleased to accord Administrative Approval for implementing the Coconut Development Programmes during the year 2012-13 to the tune of Rs. 373.991 lakhs. Component wise details are given below:-

**Coconut Development Board Schemes 2012-13**

*(Rs. in lakhs)*

| Sl. No. | Name of the scheme | TARGET | | | |
|---|---|---|---|---|---|
| | | Phy | State share | Fin CDB share | Total |
| 1 | **Programmes to be implemented by the State Department of Horticulture**<br>**Production and Distribution of Planting Materials** - Production and Distribution of TXD hybrids and other released varieties (50:50 basis) | 25.000 No.s | 3.125 | 3.125 | 6.250 |
| 2 | **Integrated farming in Coconut holdings for Productivity Improvement** | | | | |
| | a) Laying out demonstration plots @ Rs. 17.500/ha | 350 ha | - | 61.250 | 61.250 |
| | b) Maintenance of old demonstration plots @ Rs. 17,500/ha. | 200 ha | - | 35.000 | 35.000 |
| | **Total** | | **3.125** | **99.375** | **102.50** |
| 1 | **Programmes to be implemented Directly by the Coconut Development Board**<br>**Production and Distribution of Planting Materials** – Aid to Private nurseries and seed gardens | | | | |
| | a)Seed garden (Big unit) | Units | - | 3.000 | 3.000 |
| | b)Nursery (Small unit) | Units | - | 2.000 | 2.000 |
| 2 | **Expansion of Area under coconut** | 500 ha. | - | 45.00 | 45.00 |
| 3 | **Integrated Farming in Coconut Holding for Productivity Improvement**- | | | | |
| | d) Laying out demonstration plots (New) | 900 ha | - | 157.500 | 157.500 |
| | e) Maintenance of old plots | 359.95ha | - | 62.991 | 62.991 |
| | f) Organic Manure Unit | 5 units | - | 1.000 | 1.000 |
| | **Technology Mission on Coconut** | On project basis | | | |
| | **Total** | | | **271.491** | **271.491** |
| | **Grand Total** | | **3.125** | **370.866** | **373.991** |

2. The Expenditure towards the programmes to be implemented by the State Department of Horticulture will be met under the scheme "Integrated Farming in Coconut for Productivity Improvement Programme" Head of Account 2401-00-108-2-51-100 (Plan) (Financial Assistance) to the tune of Rs. 102.500 lakhs including Coconut Development Board share and State share.

3. Allocation of 30%, 16% and 8% may be made to women, scheduled caste and scheduled tribe, respectively while implementing the scheme. Monthly and quarterly reports of the schemes be reported to Coconut Development Board and to the State Government on or before 10$^{th}$ of succeeding month.

4. In order to ensure the successful implementation of the scheme State Level Monitoring Committee has been constituted as below:

| | | |
|---|---|---|
| 1 | Principal Secretary, Horticulture, Government of Karnataka | Chairman |
| 2 | Director of Horticulture, Government of Karnataka | Member |
| 3. | Director, Central Planting Crop Research Institute, Kasaragodu | Member |
| 4 | Representative, University of Horticultural Sciences, Bagalkote | Member |
| 5 | Board Member, Coconut Development Board representing the State of Karnataka | Member |
| 6 | Director, Coconut Development Board, Regional Office, Bangalore | Convener |

5. The Scheme will be implemented in strict adherence to the guidelines as stipulated by Coconut Development Board vide its letter read as (2) above.

6. The Director of Horticulture shall give wide publicity to the technology mission on coconut and identify, formulate and forward suitable projects to be proposed to Coconut Development Board as per the guidelines under the Technology Mission on Coconut.

7. This order issues with the concurrence of Internal Financial Advisor, Agriculture and Horticulture Department vide Note No. ತೋಇ 85 ಆಂಆಸ 2012, dated 12-06-2012,

By Order and in the name of the Governor of Karnataka

**B. C. Prakash**

Under Secretary to Government

P.R. 1685 Horticulture Department

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕಿನ ಕೋತನ ಹಿಪ್ಪರಗಾ ಗ್ರಾಮದ ಹತ್ತಿರ ಬೆಳಕೊಳ ನಾಲೆಗೆ ಅಡ್ಡಲಾಗಿ ಹೊಸ ಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ) ವ/ಬಿಜೆಪಿ/ಪಿಬಿ-5/2012-13/2224,
ದಿನಾಂಕ: 16-04-2012 ಹಾಗೂ ಸಂಖ್ಯೆ: 3107 ದಿನಾಂಕ: 30-05-2012.

2. ಸರ್ಕಾರದ ಆದೇಶ ಸಂಖ್ಯೆ: ಸನೀಇ 96 ಮಸಾವಿ 2011(2) (ತಾಂತ್ರಿಕ), ದಿನಾಂಕ: 20-10-2011.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕಿನ ಕೋತನ ಹಿಪ್ಪರಗಾ ಗ್ರಾಮದ ಹತ್ತಿರ ಬೆಳಕೊಳ ನಾಲೆಗೆ ಅಡ್ಡಲಾಗಿ ಹೊಸ ಕೆರೆ ನಿರ್ಮಾಣ ಕಾಮಗಾರಿಯು ಭಾರತ ಸರ್ಕಾರದ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಅನುಮೋದನೆಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 06-01-2012 |
| ಜಿಲ್ಲಾ ಟೆಂಡರ್ ಬುಲೆಟಿನ್ | 07-01-2012 |
| ಕನ್ನಡ ಪ್ರಭ ದಿನ ಪತ್ರಿಕೆ | 09-01-2012 |

ಇ-ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿದ್ದು ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್ ಅನ್ನು ದಿನಾಂಕ: 21-03-2012ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 5,50,06,340/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 5,51,11,326/- |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಮೆ. ಶಿಂದೆ & ಸನ್ಸ್, ಇಂಜಿನೀಯರ್ಸ್ ಅಂಡ್ ಕಾಂಟ್ರಾಕ್ಟರ್ಸ್, ಒಂದನೇ ದರ್ಜೆ ಗುತ್ತಿಗೆದಾರರು | 5,18,85,356/- | 5.67<br>ಕಡಿಮೆ | 5.853<br>ಕಡಿಮೆ |
| ಮೆ. ಅಮೃತಾ ಕನ್‌ಸ್ಟ್ರಕ್ಷನ್ಸ್, ಲಿ., ಒಂದನೇ ದರ್ಜೆ ಗುತ್ತಿಗೆದಾರರು | 6,29,39,181/- | 14.42<br>ಹೆಚ್ಚು | 14.20<br>ಹೆಚ್ಚು |

ಮೇಲ್ಕಂಡಂತೆ ಮೆ. ಶಿಂದೆ & ಸನ್ಸ್, ಇಂಜಿನೀಯರ್ಸ್ ಅಂಡ್ ಕಾಂಟ್ರಾಕ್ಟರ್ಸ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 5.853ರಷ್ಟು ಕಡಿಮೆಯಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 5,51,11,326/- ಮೇಲೆ ಶೇ. 5.853ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 5,18,85,356/-ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 05 ಹೊಕೆನಿ (ತಾಂತ್ರಿಕ) 2012 ಬೆಂಗಳೂರು, ದಿನಾಂಕ: 14ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕಿನ ಕೋತನ ಹಿಪ್ಪರಗಾ ಗ್ರಾಮದ ಹತ್ತಿರ ಬೆಳಕೊಳ ನಾಲೆಗೆ ಅಡ್ಡಲಾಗಿ ಹೊಸ ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.5,51,11,326/-ಮೇಲೆ ಶೇ.5.853ರಷ್ಟು ಕಡಿಮೆ ದರದಲ್ಲಿ ಅಂದರೆ ರೂ. 5,18,85,356/-ಗಳಿಗೆ (ರೂ. ಐದು ಕೋಟಿ ಹದಿನೆಂಟು ಲಕ್ಷ ಎಂಭತ್ತೈದು ಸಾವಿರದ ಮುನ್ನೂರ ಐವತ್ತಾರು ಮಾತ್ರ)ಗಳಿಗೆ ಮೆ. ಶಿಂದೆ & ಸನ್ಸ್, ಇಂಜಿನೀಯರ್ಸ್ ಅಂಡ್ ಕಾಂಟ್ರಾಕ್ಟರ್ಸ್, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1691 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಮುಧೋಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2007-08/1381, ದಿನಾಂಕ: 12-03-2008.

2. ಸರ್ಕಾರದ ಆದೇಶ ಸಂಖ್ಯೆ: ಸನೀಇ 36 ಭೂಸ್ವಾಪ್ರ 2005, ದಿನಾಂಕ: 17-05-2005.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕಿನ ಮುಧೋಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮುಧೋಳ ಗ್ರಾಮದ ಜಮೀನುಗಳಿಗೆ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ ಓದಲಾದ ದಿನಾಂಕ: 12-03-2008ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಗುಲ್ಬರ್ಗಾ ಜಿಲ್ಲೆ, ಸೇಡಂ ತಾಲ್ಲೂಕಿನ ಮುಧೋಳ ಕೆರೆಯ ನಿರ್ಮಾಣಕ್ಕಾಗಿ ಮುಧೋಳ ಗ್ರಾಮಕ್ಕೆ ಸೇರಿದ ಸ.ನಂ.ಗಳ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆಯ 4(1)ರಡಿ ಅಧಿಸೂಚನೆಯನ್ನು ದಿನಾಂಕ: 02-02-1995 ಮತ್ತು ಕಲಂ 6(1)ರಡಿ ದಿನಾಂಕ: 10/08/1995ರಂದು ಹೊರಡಿಸಲಾಗಿದ್ದು, ವಿಶೇಷ ಭೂಸ್ವಾಧೀನಾಧಿಕಾರಿ, ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳು, ಗುಲ್ಬರ್ಗಾ ರವರು ದಿನಾಂಕ: 05-01-1996ರಲ್ಲಿ ಪರಿಹಾರ ಧನದ ಐತೀರ್ಪು ನೀಡಿದ್ದಾರೆ. ಅದರಂತೆ ಪರಿಹಾರ ಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆಯ ಕಲಂ 18(1)ರನ್ವಯ ಪ್ರಿನ್ಸಿಪಲ್ ಸಿವಿಲ್ ಜಡ್ಜ್, ಗುಲ್ಬರ್ಗಾ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:1223/96 ರಿಂದ 1226/96ಗಳನ್ನು ದಾಖಲಿಸಿದ್ದು, ನ್ಯಾಯಾಲಯವು ಈ ಪ್ರಕರಣಗಳಲ್ಲಿ ಪ್ರತಿ ಎಕರೆಗೆ ರೂ.30,400/-ಗಳು ಹಾಗೂ ಪೋಟಾಖರಾಬ್ ಜಮೀನಿಗೆ ಪ್ರತಿ ಎಕರೆಗೆ ರೂ. 6,000/-ಗಳನ್ನು ನಿಗದಿಪಡಿಸಿ, ಶೇ. 12ರಷ್ಟು ಹೆಚ್ಚುವರಿ ಮಾರುಕಟ್ಟೆ ದರವನ್ನು ಕಬ್ಜೆ ಪಡೆದ ದಿನಾಂಕ: 31-01-71 ರಿಂದ ಐತೀರ್ಪಿನ ದಿನಾಂಕದವರೆಗೆ ಹಾಗೂ ಬಡ್ಡಿಯನ್ನು ಕಬ್ಜೆ ಪಡೆದ ದಿನಾಂಕದಿಂದ ಪಾವತಿಸಲು ತೀರ್ಪು ನೀಡಿದೆ. ಮಾನ್ಯ ಸರ್ವೋಚ್ಚ ನ್ಯಾಯಾಲಯದ ಆರ್.ಎಲ್.ಜೈನ್ ಪ್ರಕರಣದ ತೀರ್ಪನ್ನು ಅನುಸರಿಸಿ ಪರಿಷ್ಕೃತ ಲೆಕ್ಕಾಚಾರ ತ:ಖ್ತೆ ತಯಾರಿಸಿ ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 17-05-05ರ ಸರ್ಕಾರದ ಆದೇಶದಲ್ಲಿ ರೂ.23,53,175/-ಗಳಿಗೆ ಅನುಮೋದನೆ ನೀಡಿ ಹಣ ಪಾವತಿಸಲಾಗಿದೆ.

ಈ ಪ್ರಕರಣ ಕುರಿತು ಕಬ್ಜೆ ಪಡೆದ ದಿನಾಂಕ: 31-01-71 ರಿಂದ ಬಡ್ಡಿಯನ್ನು ಪಾವತಿಸುವ ಕುರಿತು ಕಾನೂನು ಇಲಾಖೆಯ ಅಭಿಪ್ರಾಯವನ್ನು ಪಡೆಯಲಾಗಿದ್ದು, ಕಾನೂನು ಇಲಾಖೆಯು ಈ ತೀರ್ಪಿನ ಮೇಲೆ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಮೇಲ್ಮನವಿ ವಜಾಗೊಂಡಿರುವುದರಿಂದ, ಸಿವಿಲ್ ನ್ಯಾಯಾಲಯದ ಡಿಕ್ರಿ ಜಾರಿಯಲ್ಲಿದ್ದಂತಾಗುತ್ತದೆ. ಎಲ್.ಎ.ಸಿ. ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪು ಅಂತಿಮವಾಗಿದ್ದು, ತೀರ್ಪಿನಂತೆ ಪರಿಹಾರ ಮೊತ್ತವನ್ನು ಲೆಕ್ಕಹಾಕಿ. ಪರಿಹಾರ ಧನ ಪಾವತಿಸುವಂತೆ ಅಭಿಪ್ರಾಯ ಪಟ್ಟಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 72 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ: 14ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಮುಧೋಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಮುಧೋಳ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣ ಸಂಖ್ಯೆ: 1223/96 ರಿಂದ 1226/96ಗಳಲ್ಲಿ ಗುಲ್ಬರ್ಗಾದ ಪ್ರಿನ್ಸಿಪಲ್ ಸಿವಿಲ್ ಜಡ್ಜ್ ನ್ಯಾಯಾಲಯದ ಆದೇಶದಂತೆ ಹೆಚ್ಚುವರಿ ಪರಿಹಾರ ಧನ ರೂ. 1,16,47,499-00ಗಳನ್ನು (ಒಂದು ಕೋಟಿ ಹದಿನಾರು ಲಕ್ಷದ ನಲವತ್ತೇಳು ಸಾವಿರದ ನಾನೂರ ತೊಂಭತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನೀಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012-13ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ-132 ಬಂಡವಾಳ ವೆಚ್ಚಗಳು" ಅಡಿ ಒದಗಿಸಿರುವ ಅನುದಾನದಿಂದ ರೂ.1,16,47,499/-ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20-10-10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1692 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಲಿಂಗಾನಗರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011-12/4036, ದಿನಾಂಕ: 30-07-2011.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಲಿಂಗಾನಗರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಲಿಂಗಾನಗರ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 19-03-92
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 16-03-95.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 11ರಡಿ ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಗುಲ್ಬರ್ಗಾ ಪ್ರಿನ್ಸಿಪಲ್ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ: 30-11-2000ರಂದು ಹಾಗೂ ದಿನಾಂಕ: 01-01-2002ರಂದು ನೀಡಿದ ಸಾಮಾನ್ಯ ಆದೇಶದಲ್ಲಿ ಸ.ನಂ.32/2 ಮತ್ತು 31/2ರ ಪ್ರತಿ ಎಕರೆ ಜಮೀನಿಗೆ ರೂ. 26,440/-ಗಳು ಹಾಗೂ ಉಳಿದ ಸ.ನಂ.ಗಳ ಪ್ರತಿ ಎಕರೆ ಜಮೀನಿಗೆ ರೂ.40,500/-ಗಳನ್ನು ನಿಗದಿಪಡಿಸಿ ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಅಭಿಪ್ರಾಯ ನೀಡಿದೆ.

ನ್ಯಾಯಾಲಯವು ಹೆಚ್ಚಿನ ಪರಿಹಾರಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್.ಎ.ಸಿ. ಸಂಖ್ಯೆ | ಲಿಂಗಾಪೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1. | 3/99 | 30/2 | 0-30 | 104715 |
| 2. | 4/99 | 33/2 | 0-08 | 27997 |
| 3. | 5/99 | 32/2 | 0-13 | 29206 |
| 4. | 7/99 | 24/1ಬಿ, 24/2ಬಿ | 0-22 | 76818 |
| 5. | 8/99 | 29/2 | 0-13 | 45433 |
| 6. | 9/99 | 28/2 | 0-32 | 111690 |
| 7. | 10/99 | 27/2 | 0-32 | 111690 |
| 8. | 11/99 | 26/2 | 0-30 | 104716 |
| 9. | 12/99 | 25/2 | 0-30 | 104716 |
| 10. | 13/99 | 31/2 | 0-18 | 40400 |
| | | **ಒಟ್ಟು** | | **757381** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 102 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ: 12ನೇ ಜೂನ್ 2012**

ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಲಿಂಗಾನಗರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಲಿಂಗಾನಗರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 7,57,381-00ಗಳನ್ನು (ಏಳು ಲಕ್ಷದ ಐವತ್ತೇಳು ಸಾವಿರದ ಮುನ್ನೂರ ಎಂಭತ್ತೊಂದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012-13ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಮರುಹೊಂದಾಣಿಕೆ ಅನುದಾನದಿಂದ ರೂ.7,57,381/-ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20-10-10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1693

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಉಚ್ಚ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 17-01-2012ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2011-12/241.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪೂರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೊಡ್ಲಿ ಅಲ್ಲಾಪೂರ ಗ್ರಾಮದ ಜಮೀನುಗಳಿಗೆ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಪರಿಹಾರ ಮೊತ್ತ ಪಾವತಿಸಲು ಅನುದಾನ ಬಿಡುಗಡೆ

ಮಾಡುವಂತೆ ಮೇಲೆ ಓದಲಾದ ದಿನಾಂಕ: 17-01-12ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 04–05–1995
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ: 30–06–1997

ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಚಿಂಚೋಳಿ ಸಿವಿಲ್ ನ್ಯಾಯಾಲಯ(ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ: 569/02ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ದಿನಾಂಕ: 28–06–05ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆಗೆ ರೂ.38,000/–ಗಳ ಬೆಲೆಯನ್ನು ನಿಗದಿಪಡಿಸಿದೆ.

ಸಿವಿಲ್ ನ್ಯಾಯಾಲಯದ ಆದೇಶಕ್ಕೆ ತೃಪ್ತರಾಗದ ಭೂಮಾಲೀಕರು ಉಚ್ಚ ನ್ಯಾಯಾಲಯದಲ್ಲಿ ಎಂ.ಎಫ್.ಎ 7356/06ನ್ನು ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ: 22–09–09ರಂದು ನೀಡಿದ ತೀರ್ಪಿನಲ್ಲಿ ಪ್ರತಿ ಎಕರೆ ಜಮೀನಿಗೆ ರೂ.50,000/–ಗಳನ್ನು ನಿಗದಿಪಡಿಸಿ, ಈ ಮೊತ್ತದ ಮೇಲೆ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಪತ್ರ ಸಂಖ್ಯೆ:ಲಾ 865 ಎಲ್ಎಸ್‌ಪಿ 2011, ದಿನಾಂಕ: 14–09–2011ರಲ್ಲಿ ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಧನದ ವಿವರ ಕೆಳಕಂಡಂತಿವೆ:

| ಕ್ರ.ಸಂ. | ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಕೊಡ್ಲಿ ಅಲ್ಲಾಪೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1. | 569/02 | 7356/06 | 31 | 12–03 | 6,95,181–00 |
| | ಒಟ್ಟು | | | | **6,95,181–00** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 29 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ: 13ನೇ ಜೂನ್ 2012**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕೊಡ್ಲಿ ಅಲ್ಲಾಪೂರ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್ 31ರ ಜಮೀನಿಗೆ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಮೊತ್ತ ರೂ.6,95,181–00ಗಳನ್ನು (ಆರು ಲಕ್ಷದ ತೊಂಭತ್ತೈದು ಸಾವಿರದ ಒಂದುನೂರ ಎಂಭತ್ತೊಂದು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಲೆಕ್ಕಾಚಾರ ತ:ಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಎರಡನೇ ಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.6,95,181/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1694

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ಯು.ಬೇವಿನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ಲೆಶಾಖೆ/ಲೆಸ-1/3/ಭೂಸ್ವಾಧೀನ/10-11/1423, ದಿನಾಂಕ: 21-06-2010.

**ಪ್ರಸ್ತಾವನೆ :**

ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು ಯು. ಬೇವಿನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಉಚ್ಚಂಗಿದುರ್ಗ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ರೂ. 2,07,634/-ಗಳನ್ನು ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ: 21-06-11ರ ಪತ್ರದಲ್ಲಿ ಕೋರಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿವೆ:

- ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ದಿನಾಂಕ: 18-01-1996
- ಭೂಸ್ವಾಧೀನ ಕಾಯ್ದೆ ಕಲಂ 6(1)ರ ಅಧಿಸೂಚನೆ ದಿನಾಂಕ: 12-12-1996
- ಭೂಸ್ವಾಧೀನಾಧಿಕಾರಿಗಳು ಐತೀರ್ಪು ಹೊರಡಿಸಿದ ದಿನಾಂಕ: 31-01-1997

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಭೂಮಾಲೀಕರು ಈಗಾಗಲೇ ಪರಿಹಾರ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹರಿಹರ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಸಂಖ್ಯೆ: 95/02ನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ಪ್ರತಿ ಎಕರೆ ಜಮೀನಿಗೆ ರೂ.34,300/-ಗಳ ಭೂಮೌಲ್ಯವನ್ನು ನಿಗದಿಪಡಿಸಿ, ಇತರೆ ಸೌಲಭ್ಯಗಳೊಂದಿಗೆ ಪಾವತಿಸುವಂತೆ ಆದೇಶಿಸಿದೆ. ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಇ.ಪಿ ಸಂಖ್ಯೆ | ಉಚ್ಚಂಗಿದುರ್ಗ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1. | 95/02 | 74/10 | 434/ಸಿ | 4-28 | 2,07,634-00 |
| | ಒಟ್ಟು | | | | **2,07,634-00** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 90 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 13ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು ಯು.ಬೇವಿನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಉಚ್ಚಂಗಿದುರ್ಗ ಗ್ರಾಮದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣ ಸಂಖ್ಯೆ:95/02ರಲ್ಲಿ ನೀಡಿರುವ ಆದೇಶದಂತೆ ರೂ.2,07,634-00ಗಳನ್ನು (ಎರಡು ಲಕ್ಷದ ಏಳು ಸಾವಿರದ ಆರುನೂರ ಮೂವತ್ತನಾಲ್ಕು ರೂ.ಗಳು ಮಾತ್ರ)ಗಳ ಪರಿಹಾರವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012-13ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು- ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.2,07,634/-ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20-10-10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1695

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

The Committee approved as under:

- To establish "3 MW Solar Thermal Power Plant" as an additional activity with an investment of Rs. 45.00 cr. in 20 acres of the land out of 200 acres of land allotted earlier to establish "250 MW Gas based power plant".
- Ratified the Corrigendum issued on 11.05.2011 to the GO No. CI 388 SPI 2010 dated:14.07.2010 for enhancing the extent of land requirement to 200 acres.

Government has examined the recommendations made by the State High Level Clearance Committee in the 27th Meeting held on 13-04-2012, in all aspects.

Hence the following order.

**GOVERNMENT ORDER NO. CI 388 SPI 2010, BANGALORE, DATED : 07.05.2012**

Government is pleased to approve the proposal of the company To establish "3 MW Solar Thermal Power Plant" as an additional activity with an investment of Rs. 45.00 cr. in 20 acres of the land out of 200 acres of land allotted earlier to establish "250 MW Gas based power plant" and Ratified the Corrigendum issued on 11.05.2011 to the G.O No. CI 388 SPI 2010 dated: 14.07.2010 for enhancing the extent of land requirement to 200 acres.

Other terms and conditions remain the same as in the Government Orders read at (2) and (3) above.

By Order and in the name of the Governor of Karnataka,

**JYOTHI R.J.**

Desk Officer (Technical Cell)

Commerce & Industries Department.

**P.R. 1466**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ ಇವರಿಗೆ ಜಮೀನು ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ :** 1) ದಿನಾಂಕ:23–11–2011ರಂದು ಸಂಸ್ಥೆಯು ಸಲ್ಲಿಸಿದ ಮನವಿ.

2) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಕಾರ್ಯಪಾಲಕ ಸದಸ್ಯರು ಕರ್ನಾಟಕ ಕೈಗಾರಿಕ ಪ್ರದೇಶಾಭಿವೃದ್ದಿ ಮಂಡಳಿ ಇವರ ದಿನಾಂಕ: 13–09–2011ರ ಪತ್ರ.

**ಪ್ರಸ್ತಾವನೆ:**

ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಮತ್ತು ಸ್ಟೀಲ್ ಕಂಪನಿ ಲಿಮಿಟೆಡ್ (ಜೆಸ್ಕೋ) ಬೆಂಗಳೂರು, (ಮೆ॥ ನಾಗಾರ್ಜುನ ಫರ್ಟಿಲೈಸರ್ ಮತ್ತು ಕೆಮಿಕಲ್ಸ್ ಲಿಮಿಟೆಡ್‌ರವರ ಸಮೂಹಕ್ಕೆ ಸಂಬಂಧಿಸಿದ ಕಂಪನಿ) ಇವರು ಮಂಗಳೂರು ತಾಲ್ಲೂಕಿನ ಕೆಂಜಾರ್ ಮತ್ತು ತೋಕೂರು ಗ್ರಾಮಗಳ ವ್ಯಾಪ್ತಿಯ ಪ್ರದೇಶದಲ್ಲಿ ರೂ.1,500 ಕೋಟಿ ಮೊತ್ತದ ಬಂಡವಾಳ ಹೂಡಿಕೆಯೊಂದಿಗೆ ಫರ್ಟಿಲೈಸರ್ ಮತ್ತು ಕೆಮಿಕಲ್ಸ್ ಘಟಕವನ್ನು ಸ್ಥಾಪಿಸುವ ಪ್ರಸ್ತಾವನೆಯನ್ನು ಸಲ್ಲಿಸಿದ್ದು ದಿನಾಂಕ:14–07–2011ರಂದು ನಡೆದ 25ನೇ ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿ ಸಭೆಯಲ್ಲಿ ಅನುಮೋದನೆ ನೀಡಲಾಗಿರುತ್ತದೆ. ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಸಿಐ 175 ಎಸ್‌ಪಿಐ 2011, ದಿನಾಂಕ:18–08–2011ನ್ನು ಹೊರಡಿಸಲಾಗಿರುತ್ತದೆ.

ಮೆ॥ ಜೆಸ್ಕೋ ಲಿ. ಅವರ ಬಂಡವಾಳ ಹೂಡಿಕೆ ಪ್ರಸ್ತಾವನೆಯನ್ನು ಅನುಮೋದಿಸುವಾಗ ಕೆಐಎಡಿಬಿ ರವರು ಕೈಗಾರಿಕಾ ಪ್ರದೇಶವೊಂದನ್ನು ಸ್ಥಾಪಿಸಲು ಗುರುತಿಸಿದ 193.57 ಎಕರೆ ಜಾಗವನ್ನು ಕೆಐಎಡಿಬಿ ಯವರಿಗೆ ಬಿಟ್ಟುಕೊಡುವ ಷರತ್ತನ್ನು ಹಾಕಲಾಗಿತ್ತು. ಈ ವಿಷಯದ ಬಗ್ಗೆ ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿಯಲ್ಲಿ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳಲಾಗಿರುತ್ತದೆ. ಅದೇ ರೀತಿ ಸರ್ಕಾರಿ ಆದೇಶದಲ್ಲಿ ಷರತ್ತನ್ನು ಸೇರಿಸಲಾಗಿರುತ್ತದೆ.

ದಿನಾಂಕ:23–08–2011ರಂದು ಸಂಸ್ಥೆಯವರು ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರಿಗೆ ಮನವಿಯನ್ನು ಸಲ್ಲಿಸಿ ದಿನಾಂಕ: 18–08–2011ರ ಸರ್ಕಾರದ ಆದೇಶದಲ್ಲಿ ವಿಧಿಸಿದ್ದ (ಕೆಐಎಡಿಬಿ ಯವರು ಕೈಗಾರಿಕ ಪ್ರದೇಶವನ್ನು ಸ್ಥಾಪಿಸಲು ಗುರುತಿಸಿದ 193.57 ಎಕರೆ ಜಾಗವನ್ನು ಕೆಐಎಡಿಬಿ ಗೆ ಬಿಟ್ಟುಕೊಡುವ) ಷರತ್ತನ್ನು ಕೈಬಿಡುವಂತೆ ಕೋರಿರುತ್ತಾರೆ.

ದಿನಾಂಕ:14–09–2011ರಂದು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಕಾರ್ಯಪಾಲಕ ಸದಸ್ಯರು ಕರ್ನಾಟಕ ಕೈಗಾರಿಕ ಪ್ರದೇಶಾಭಿವೃದ್ದಿ ಮಂಡಳಿ ಇವರು ಸಂಸ್ಥೆಯ ಪ್ರಸ್ತಾವನೆಯ ಬಗ್ಗೆ ಪ್ರತಿಕ್ರಿಯಿಸುತ್ತಾ ಪ್ರಸ್ತಾಪಿತ 193.57 ಎಕರೆ ಜಮೀನು ಮಂಗಳೂರು ಜಿಲ್ಲೆಯ ಕೈಗಾರಿಕಾ ಪ್ರದೇಶವನ್ನು ಅಭಿವೃದ್ದಿ ಪಡಿಸಲು ಅತೀ ಅವಶ್ಯಕವಾಗಿ ಬೇಕಾಗಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ಈ ವಿಷಯವನ್ನು ಪರಿಶೀಲಿಸಿ ಮಾನ್ಯ ಸಚಿವರು, ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಇವರು ಸರ್ಕಾರದ ಆದೇಶ ಸಂಖ್ಯೆ: ಸಿಐ 175 ಎಸ್‌ಪಿಐ 2011 ದಿನಾಂಕ: 18.08.2011 ರಲ್ಲಿ ವಿಧಿಸಲಾಗಿರುವ ಷರತ್ತನ್ನು ಕೈಬಿಡಬಹುದೆಂದು ಶಿಫಾರಸ್ಸು ಮಾಡಿದ್ದು, ಸನ್ಮಾನ್ಯ ಮುಖ್ಯ ಮಂತ್ರಿಯವರು ಮನ್ಯ ಸಚಿವರ ಶಿಫಾರಸ್ಸನ್ನು ಒಪ್ಪಿಕೊಂಡಿರುತ್ತಾರೆ.

ಸಂಸ್ಥೆಯ ಕೋರಿಕೆಯನ್ನು ಸರ್ಕಾರವು ಎಲ್ಲಾ ಸಂಭವನೀಯ ದೃಷ್ಟಿಕೋನದಿಂದ ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 175 ಎಸ್‌ಪಿಐ 2011, ಬೆಂಗಳೂರು, ದಿನಾಂಕ: 07.05.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಸಿಐ 175 ಎಸ್‌ಪಿಐ 2011, ದಿನಾಂಕ:18–08–2011ರಲ್ಲಿ, **"**ಕೆಐಎಡಿಬಿ ಯವರು ಕೈಗಾರಿಕಾ ಪ್ರದೇಶವನ್ನು ಸ್ಥಾಪಿಸಲು ಗುರುತಿಸಿದ 193.57 ಎಕರೆ ಜಾಗವನ್ನು ಕೆಐಎಡಿಬಿ ಗೆ ಬಿಟ್ಟುಕೊಡುವಂತೆ**"** ಎಂದು ವಿಧಿಸಿದ್ದ ಷರತ್ತನ್ನು ಕೈಬಿಡಲು ಆದೇಶಿಸಿದೆ. ಮುಂದುವರಿದು ಮೆ॥ ಜಯಪ್ರಕಾಶ್ ಇಂಜಿನಿಯರಿಂಗ್ ಅಂಡ್ ಸ್ಟೀಲ್ ಕಂಪನಿ ಲಿಮಿಟೆಡ್ ಇವರು ಹಿಂತಿರುಗಿಸುತ್ತಿರುವ / ಈಗಾಗಲೇ ಹಿಂದಿರುಗಿಸಿದ 200 ಎಕರೆ ಜಮೀನಿನ ಪೈಕಿ ಸೀಮಾ ಶುಲ್ಕ ಕಚೇರಿಯನ್ನು ಪ್ರಾರಂಭಿಸಲು ಯೋಗ್ಯವಾಗಿರುವ 48.39 ಎಕರೆ ಜಮೀನನ್ನು ಕೆಐಎಡಿಬಿ ಯವರು ಮಂಗಳೂರು ಎಸ್‌ಇಜೆಡ್ ನಿಯಮಿತಕ್ಕೆ ಹಸ್ತಾಂತರಿಸಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜ್ಯೋತಿ.ಆರ್.ಜಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಪಿ.ಆರ್. 1468**

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ವಿಜಯಲಕ್ಷ್ಮಿ ಪೋಳ್, ಹಿಂದಿನ ಚುನಾವಣಾ ತಹಶೀಲ್ದಾರ್, ಧಾರವಾಡ, ಇವರ ವೈದ್ಯಕೀಯ ವೆಚ್ಚದ ಹಣವನ್ನು ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :** 1) ಅಪರ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ ಇವರ ಪತ್ರ ಸಂಖ್ಯೆ : ಲೆವಿ/ವೈವೆ/ವಹಿ/49/2010–11, ದಿನಾಂಕ : 07–02–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರ ದಿನಾಂಕ : 07/02/2011ರ ಪತ್ರದಲ್ಲಿ, ಅಪರ ಜಿಲ್ಲಾಧಿಕಾರಿಗಳು, ಧಾರವಾಡ ಇವರು ಶ್ರೀಮತಿ ವಿಜಯಲಕ್ಷ್ಮೀ ಪೋಳ್, ಹಿಂದಿನ ಚುನಾವಣಾ ತಹಶೀಲ್ದಾರ್, ಧಾರವಾಡ, ಇವರಿಗೆ ಎಡಗಾಲಿನ ಮಂಡಿಯ ಚಿಕಿತ್ಸೆಗಾಗಿ ರೂ. 15019–00 ಹಾಗೂ ಧಾರವಾಡ ಜಿಲ್ಲೆ ಖಾಸಗಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ವೆಚ್ಚ ರೂ. 617–00 ಇದ್ದು, ಸದರಿ ಮೊತ್ತವನ್ನು ಮರುಪಾವತಿಸುವಂತೆ ಕೋರಿ ಮನವಿಯನ್ನು ಸಲ್ಲಿಸಿರುತ್ತಾರೆ. ಸದರಿಯವರು ತಮ್ಮ ಮಂಡಿ ನೋವಿನ ಚಿಕಿತ್ಸೆಯನ್ನು ಹೊರ ರಾಜ್ಯದಲ್ಲಿ (ಮಹಾರಾಷ್ಟ್ರ) ಪಡೆದಿರುವ ಕಾರಣ, ಈ ವೈದ್ಯಕೀಯ ವೆಚ್ಚದ ಹಣವನ್ನು ಮರುಪಾವತಿ ಮಾಡಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 31ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 14ನ್ನು ಸಡಿಲಿಸಿ ಶ್ರೀಮತಿ ವಿಜಯಲಕ್ಷ್ಮಿ ಪೋಳ್, ಹಿಂದಿನ ಚುನಾವಣಾ ತಹಶೀಲ್ದಾರ್, ಧಾರವಾಡ, ಇವರು ತಮ್ಮ ಎಡಗಾಲಿನ ಮಂಡಿಯ ಚಿಕಿತ್ಸೆಗಾಗಿ ವೆಚ್ಚ ಮಾಡಿರುವ ರೂ. 15,636/ಗಳನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡ ಆದೇಶ ;

**ಸರ್ಕಾರದ ಆದೇಶ ಸಂಖ್ಯೆ: ಆರ್ ಡಿ 165 ಎಎಸ್‌ಡಿ 2011, ಬೆಂಗಳೂರು, ದಿನಾಂಕ: 04–05–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ವಿಜಯಲಕ್ಷ್ಮಿ ಪೋಳ್, ಹಿಂದಿನ ಚುನಾವಣಾ ತಹಶೀಲ್ದಾರ್, ಧಾರವಾಡ, ಇವರು ತಮ್ಮ ಎಡಗಾಲಿನ ಮಂಡಿಯ ಚಿಕಿತ್ಸೆಗಾಗಿ ವೆಚ್ಚ ಮಾಡಿರುವ ರೂ. 15,636/–ಗಳನ್ನು (ಹದಿನೈದು ಸಾವಿರದ ಆರುನೂರ ಮೂವತ್ತಾರು ಮಾತ್ರ) ಮಂಜೂರು ಮಾಡಿ ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆದೇಶ ಸಂಖ್ಯೆ : ಸಿಆಸುಇ 34 ಎಸ್‌ಎಂಆರ್ 2011 ದಿನಾಂಕ : 28–11–2011 ರನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ಅವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ವಿ. ರಾಮಲಿಂಗಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1388**

## ಕಂದಾಯ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಕಂಇ 15 ಎಡಿಇ 2011, ಬೆಂಗಳೂರು, ದಿನಾಂಕ: 08–05–2012

ಶ್ರೀ ಬಿ. ಸಂಪತ್ ಕುಮಾರ್, ಹಿಂದಿನ ತಹಶೀಲ್ದಾರ್ ಹಾಗೂ ಶ್ರೀ ಸಿ. ಕೃಷ್ಣಚಾರ್, ಪ್ರ.ದ.ಸ. ಇವರುಗಳ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಿಸಲಾದ ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 15 ಎಡಿಇ 2011, ದಿನಾಂಕ : 09–08–2011ರಲ್ಲಿ ಈ ಕೆಳಗಿನಂತೆ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

| ಹಾಲಿ ಇರುವುದು | ತಿದ್ದುಪಡಿ ಆಗಿರುವುದು |
|---|---|
| ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ, ಬೆಂಗಳೂರು ಇವರ ಕಛೇರಿಯ, ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. | ಜಿಲ್ಲಾಧಿಕಾರಿಗಳು, ತುಮಕೂರು ಇವರ ಕಛೇರಿಯ, ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. |
| ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 22 ಸೇಇವಿ 2007, ದಿನಾಂಕ : 11–04–2008 ರನ್ವಯ ರೂ. 8000/– (ಎಂಟು ಸಾವಿರ ರೂ.ಗಳು ಮಾತ್ರ)ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1500/– (ಒಂದು ಸಾವಿರದ ಐನೂರು ರೂ.ಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್) ಅನ್ನು ಜಿಲ್ಲಾದಿಕಾರಿಗಳು ಬೆಂಗಳೂರು ನಗರ, ಬೆಂಗಳೂರು ಇವರು ಪಾವತಿ ಮಾಡತಕ್ಕದ್ದು. | ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2010, ದಿನಾಂಕ : 28–04–2011 ರನ್ವಯ ಸಂಚಿತ ಸಂಭಾವನೆಯ ಬದಲಾಗಿ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2010, ದಿನಾಂಕ: 28–04–2011 ರನ್ವಯ ದೋಷಾರೋಪಣಾ ಪಟ್ಟಿಯನ್ನು ತಯಾರಿಸಲು ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ಪ್ರತಿ ಪ್ರಕರಣಕ್ಕೆ ರೂ. 3,000–00 (ಮೂರು ಸಾವಿರ) ಮಾತ್ರ ಸಂಭಾವನೆ, ವಿಚಾರಣಾಧಿಕಾರಿಯಾಗಿ ನೇಮಕವಾಗುವ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಗೆ ಪ್ರತಿ ವಿಚಾರಣೆಗೆ ರೂ. 15,000–00 (ಹದಿನೈದು ಸಾವಿರ) ಮಾತ್ರ (ಸಂಭಾವನೆ ಭತ್ಯೆಯೂ ಸೇರಿದಂತೆ) ಹಾಗೂ ಮಂಡನಾಧಿಕಾರಿಗೆ ವಿಚಾರಣೆಯ ದಿನವೊಂದಕ್ಕೆ ರೂ. 400–00 (ನಾಲ್ಕೂ ನೂರು) ಮಾತ್ರ ಸಂಭಾವನೆಯನ್ನು ಜಿಲ್ಲಾಧಿಕಾರಿ, ತುಮಕೂರು ಇವರು ಪಾವತಿ ಮಾಡತಕ್ಕದ್ದು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ವಿ. ರಾಮಲಿಂಗಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1389**

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಜಯಪ್ರಕಾಶ್. ಮುಜರಾಯಿ ತಹಶೀಲ್ದಾರ್, ಜಿಲ್ಲಾಧಿಕಾರಿ ಕಛೇರಿ, ಮಂಡ್ಯ ಇವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಪ್ರಾದೇಶಿಕ ಆಯುಕ್ತರು, ಮೈಸೂರು ಇವರ ಪತ್ರ ಸಂಖ್ಯೆ : ಸಿಬ್ಬಂದಿ (1) ಸಿಆರ್ : 577 : 2007–08, ದಿನಾಂಕ : 21–07–2009, 27–07–2010 ಮತ್ತು 22–12–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಪ್ರಾದೇಶಿಕ ಆಯುಕ್ತರು, ಮೈಸೂರು ಇವರು ಶ್ರೀ ಜಯಪ್ರಕಾಶ್, ಮುಜರಾಯಿ ತಹಶೀಲ್ದಾರ್, ಜಿಲ್ಲಾಧಿಕಾರಿ ಕಛೇರಿ, ಮಂಡ್ಯ ಇವರು ಕಛೇರಿ ಸಹಾಯಕರು, ಜಿಲ್ಲಾಧಿಕಾರಿ ಕಛೇರಿ, ಮಂಡ್ಯ ಈ ಹುದ್ದೆಯಲ್ಲಿ ದಿನಾಂಕ : 24–04–2006 ರಿಂದ 02–09–2007 ರವರೆಗೆ ಅಧಿಕ ಪ್ರಭಾರದಲ್ಲಿ ಕಾರ್ಯ ನಿರ್ವಹಿಸಿದ ಅವಧಿಗೆ ಪ್ರಭಾರ ಭತ್ಯೆ ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 68 ರನ್ವಯ ಪರಿಶೀಲಿಸಿದ ನಂತರ ಶ್ರೀ ಜಯಪ್ರಕಾಶ್, ಮುಜರಾಯಿ ತಹಶೀಲ್ದಾರ್, ಜಿಲ್ಲಾಧಿಕಾರಿ ಕಛೇರಿ, ಮಂಡ್ಯ ಇವರು ಕಛೇರಿ ಸಹಾಯಕರು, ಜಿಲ್ಲಾಧಿಕಾರಿ ಕಛೇರಿ, ಮಂಡ್ಯ ಈ ಹುದ್ದೆಯಲ್ಲಿ ದಿನಾಂಕ : 24–04–2006 ರಿಂದ 02–09–2007 ರವರೆಗೆ ಅಧಿಕ ಪ್ರಭಾರದಲ್ಲಿ ಕಾರ್ಯ ನಿರ್ವಹಿಸಿದ ಅವಧಿಗೆ ವೇತನ ಶ್ರೇಣಿ ರೂ. 11,400–21,600ರ ಕನಿಷ್ಠ ವೇತನದ ಶೇ. 5 ರಷ್ಟು ಪ್ರಭಾರ ಭತ್ಯೆ ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 518 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 11–05–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಜಯಪ್ರಕಾಶ್, ಮುಜರಾಯಿ ತಹಶೀಲ್ದಾರ್, ಜಿಲ್ಲಾಧಿಕಾರಿ ಕಛೇರಿ, ಮಂಡ್ಯ ಇವರು ಕಛೇರಿ ಸಹಾಯಕರು, ಜಿಲ್ಲಾಧಿಕಾರಿ ಕಛೇರಿ, ಮಂಡ್ಯ ಈ ಹುದ್ದೆಯಲ್ಲಿ ದಿನಾಂಕ : 24–04–2006 ರಿಂದ 02–09–2007 ರವರೆಗೆ ಅಧಿಕ ಪ್ರಭಾರದಲ್ಲಿ ಕಾರ್ಯ ನಿರ್ವಹಿಸಿದ ಅವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 68 ರನ್ವಯ ವೇತನ ಶ್ರೇಣಿ ರೂ. 11,400–21,600ರ ಕನಿಷ್ಠ ವೇತನದ ಶೇ. 5 ರಷ್ಟು ಪ್ರಭಾರ ಭತ್ಯೆ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಕಂಇ 17810 ಆಂಆಸ 2012, ದಿನಾಂಕ 25–04–2012ರ ಸಹಮತದ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 1996, ದಿನಾಂಕ : 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1390**

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಕೆ. ಎನ್. ರಾಜಮಣಿ, (ನಿವೃತ್ತ) ರಜೆ ಮೀಸಲು ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರಿಗೆ ಮೂರನೇ ಸ್ಥಗಿತ ವೇತನ ಬಡ್ತಿ ಮಂಜೂರಾತಿ ಕುರಿತು.

**ಓದಲಾಗಿದೆ :** 1) ಶ್ರೀಮತಿ ಕೆ. ಎನ್. ರಾಜಮಣಿ, ನಿವೃತ್ತ ತಹಶೀಲ್ದಾರ್ ಇವರು ದಿನಾಂಕ : 30–03–2011ರ ಪತ್ರ.
2) ಮಹಾಲೇಖಪಾಲರ ಪತ್ರ ಸಂಖ್ಯೆ : GE1/R2/Vol 725/1181, ದಿನಾಂಕ : 01–11–2011.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂ. (1) ದಿನಾಂಕ : 01–02–2010ರ ಪತ್ರದಲ್ಲಿ ಶ್ರೀಮತಿ ಕೆ. ಎನ್. ರಾಜಮಣಿ, ನಿವೃತ್ತ ತಹಶೀಲ್ದಾರ್ ಇವರು ತಮಗೆ ದಿನಾಂಕ : 01–08–2004 ರಿಂದ ಜಾರಿಗೆ ಬರುವಂತೆ ಒಟ್ಟು 3 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಬಗ್ಗೆ ಮಹಾಲೇಖಪಾಲರು ಮೇಲೆ ಓದಲಾದ ಕ್ರಸಂ. (2)ರ ದಿನಾಂಕ : 01–11–2011ರ ಪತ್ರದಲ್ಲಿ ಶ್ರೀಮತಿ ಕೆ. ಎನ್. ರಾಜಮಣಿ, ರವರ ವೇತನ ಶ್ರೇಣಿ ರೂ. 6,000–11,200ರಲ್ಲಿ ದಿನಾಂಕ : 01–08–2003 ರಂದು ಗರಿಷ್ಟ ವೇತನ ಮಿತಿ ತಲುಪಿರುತ್ತಾರೆಂದು ಸದರಿಯವರು ದಿನಾಂಕ : 01–08–2004 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿಗೆ, ದಿನಾಂಕ : 01–08–2005 ರಿಂದ ಎರಡನೇ ಸ್ಥಗಿತ ವೇತನ ಬಡ್ತಿಗೆ, ದಿನಾಂಕ : 01–08–2006 ರಿಂದ ಮೂರನೇ ಸ್ಥಗಿತ ಬಡ್ತಿಗೆ ಅರ್ಹರಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 338 ಎಎಸ್‌ಡಿ 2011, ಬೆಂಗಳೂರು, ದಿನಾಂಕ: 07–05–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀಮತಿ ಕೆ. ಎನ್. ರಾಜಮಣಿ, ನಿವೃತ್ತ ತಹಶೀಲ್ದಾರ್ ಇವರಿಗೆ ಈ ಕೆಳಕಂಡಂತೆ ಒಟ್ಟು 3 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಿದೆ.

1) ದಿನಾಂಕ : 01–08–2004 ರಿಂದ ಮೊದಲನೇ – ಸ್ಥಗಿತ ವೇತನ ಬಡ್ತಿ – (ವೇತನ ಶ್ರೇಣಿ–ರೂ. 6000–11,200)

2) ದಿನಾಂಕ : 01–08–2005 ರಿಂದ ಎರಡನೇ – ಸ್ಥಗಿತ ವೇತನ ಬಡ್ತಿ – (ವೇತನ ಶ್ರೇಣಿ – ರೂ. 6000–11,200)

3) ದಿನಾಂಕ : 01–08–2006 ರಿಂದ ಮೂರನೇ – ಸ್ಥಗಿತ ವೇತನ ಬಡ್ತಿ – (ವೇತನ ಶ್ರೇಣಿ – ರೂ. 11,400–21,600)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1391**

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ರೇಷ್ಮಾ ಹಾನಗಲ್, ಪ್ರೊಬೇಷನರಿ ತಹಶೀಲ್ದಾರ್ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂ. ಕಂಇ 51 ಎಎಸ್‌ಡಿ 2008, ದಿನಾಂಕ : 23–05–2008.
2) ಶ್ರೀಮತಿ ರೇಷ್ಮಾ ಹಾನಗಲ್ ಇವರ ಮನವಿ, ದಿನಾಂಕ : 11–06–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂ. (1) ದಿನಾಂಕ : 23–05–2008ರ ಅಧಿಸೂಚನೆಯಲ್ಲಿ ಶ್ರೀಮತಿ ರೇಷ್ಮಾ ಹಾನಗಲ್ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗ್ರೇಡ್–2 ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಕ್ರ.ಸಂ. (2)ರಲ್ಲಿ ಸದರಿಯವರು ಈ ಹುದ್ದೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕಿಯಾಗಿ ದಿನಾಂಕ : 01–08–2002 ರಿಂದ 07–06–2008ರವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ಸಮೂಹ ಸಹಾಯಕ ಶಿಕ್ಷಣಾಧಿಕಾರಿಗಳ ಕಛೇರಿ ಸಾಶಿಇ ಹರಿಹರ–1 ಕೇಂದ್ರ, ಹರಿಹರರವರ ಪತ್ರ ಸಂ. ಸಿ.1.ಪ್ರಾ.ಶಾ.ಶಿ.ಉ. ಹುದ್ದೆ ಆಯ್ಕೆ 04:2008–09, ದಿನಾಂಕ : 06–06–2008ರಂದು ಶಿಕ್ಷಣ ಇಲಾಖೆಯಿಂದ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಸದರಿಯವರು ಶಿಕ್ಷಣ ಇಲಾಖೆಯಲ್ಲಿ ದಿನಾಂಕ : 01–08–2002 ರಿಂದ 07–06–2008ವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀಮತಿ ರೇಷ್ಮಾ ಹಾನಗಲ್ ಇವರ ದಿನಾಂಕ : 11–06–2008ರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಸದರಿಯವರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ಸಲ್ಲಿಸಿದ್ದ ದಿನಾಂಕ : 01–08–2002 ರಿಂದ 07–06–2008ರ ವರೆಗಿನ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ಹುದ್ದೆಯ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 309 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 04–05–2012

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀಮತಿ ರೇಷ್ಮಾ ಹಾನಗಲ್, ಪ್ರೊಬೇಷನರಿ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಇವರು ಕಂದಾಯ ಇಲಾಖೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ : 01–08–2002 ರಿಂದ 07–06–2008ವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ)ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7)ರವರ ಟಿಪ್ಪಣಿ ಸಂ. ಅಇ 821/ವೆಚ್ಚ–7/2009, ದಿನಾಂಕ: 03–09–2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1404**

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸಿ. ಜೆ. ಕೃಷ್ಣಕುಮಾರ್, ತಹಶೀಲ್ದಾರ್, ತರೀಕೆರೆ ತಾಲ್ಲೂಕು ಇವರು ಲಂಚ ಪ್ರಕರಣದಲ್ಲಿ ಸಿಲುಕಿಕೊಂಡ ಹಿನ್ನೆಲೆಯಲ್ಲಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿರುವ ಇವರ ಅಮಾನತ್ತಿನ ಅವಧಿಯಲ್ಲಿ 6 ತಿಂಗಳ ನಂತರದ ಅವಧಿಗೆ ಕೆ.ಸಿ. ಎಸ್. ನಿಯಮ 98(1)ರನ್ವಯ ಜೀವನಾಧಾರ ಭತ್ಯೆಯನ್ನು ಶೇ. 75ರಷ್ಟಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಕಂಇ 24 ಎಡಿಇ 2011, ಬೆಂಗಳೂರು, ದಿನಾಂಕ : 04–06–20011.

2) ಅಮಾನತ್ತುಗೊಂಡ ಮನವಿದಾರರ ದಿನಾಂಕ : 05–01–2012.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂ. (1) ರಲ್ಲಿ ಶ್ರೀ ಸಿ. ಜೆ. ಕೃಷ್ಣಕುಮಾರ್, ತಹಶೀಲ್ದಾರ್ ರವರನ್ನು ಭೇಟಿ ಮಾಡಿ ವಿಚಾರಿಸಲಾಗಿ, ಜಮೀನುಗಳ ದುರಸ್ತಿ ಸಂಬಂಧ ನನಗೂ ಮತ್ತು ತಾಲ್ಲೂಕು ಸರ್ವೇಯರ್ ರವರಿಗೆ ಒಟ್ಟು 2 ಲಕ್ಷ ರೂಗಳನ್ನು ಕೊಡಬೇಕೆಂದು ತಗಾದೆ ಮಾಡಿರುತ್ತಾರೆಂದು ನಂತರ ಫಿರ್ಯಾದುದಾರರು ಪುನಃ ದಿನಾಂಕ : 23–04–2004ರಂದು ಸರ್ವೇಯರ್ ರಮೇಶ್ ರವರನ್ನು ಭೇಟಿ ಮಾಡಿ ವಿಚಾರಿಸಿದಾಗ 1 ಲಕ್ಷ ರೂ.ಗಳ ಮೊತ್ತವನ್ನು ನೀಡುವಂತೆ ಒತ್ತಾಯಿಸಿರುತ್ತಾರೆ. ಆದರೆ, ಫಿರ್ಯಾದುದಾರರು ಲಂಚದ ಹಣ ನೀಡಲು ಇಷ್ಟವಿಲ್ಲದ ಕಾರಣ ಲೋಕಾಯುಕ್ತ ಪೊಲೀಸಿನವರಿಗೆ ದೂರನ್ನು ನೀಡಿರುತ್ತಾರೆ. ದಿನಾಂಕ : 29–04–2011 ರಂದು ಶ್ರೀ ಸಿ. ಜೆ. ಕೃಷ್ಣಕುಮಾರ್, ತಹಶೀಲ್ದಾರ್, ತರೀಕೆರೆ ಮತ್ತು ಶ್ರೀ ರಮೇಶ್, ಭೂಮಾಪಕರು ಲಂಚದ ಹಣ ರೂ. 1 ಲಕ್ಷಕ್ಕೆ ಒತ್ತಾಯಿಸಿ, ಅದನ್ನು ಸ್ವೀಕರಿಸುವಾಗ ಪೊಲೀಸರ ಬಲೆಗೆ ಸಿಕ್ಕಿಬಿದ್ದಿರುತ್ತಾರೆ. ದೇವನಹಳ್ಳಿ ತಾಲ್ಲೂಕು ಚನ್ನರಾಯಪಟ್ಟಣ ಹೋಬಳಿಯ ಸೋಮತ್ತನಹಳ್ಳಿ ಗ್ರಾಮದ ಸರ್ಕಾರಿ ಜಮೀನು ಸ. ನಂ. 148ರಲ್ಲಿ ಶ್ರೀ ಕೃಷ್ಣಪ್ಪ ಬಿನ್ ಮಾರಪ್ಪ ಮತ್ತು ಶ್ರೀಮತಿ ನಾರಾಯಣಮ್ಮ ಕೋಂ ಮುನಿಶ್ಯಾಮಪ್ಪ ಇವರಿಗೆ ಅಕ್ರಮವಾಗಿ ಸಾಗುವಳಿ ಚೀಟಿ ನೀಡಿ ಹಕ್ಕು ದಾಖಲೆ ಮಾಡಿರುವುದು ಹಾಗೂ ದೇವನಹಳ್ಳಿ ತಾಲ್ಲೂಕು ಕುಂದಾಣ ಹೋಬಳಿ ತೈಲಗೆರೆ ಗ್ರಾಮದ ಸರ್ಕಾರಿ ಜಮೀನು ಸ. ನಂ. 105ರಲ್ಲಿ 3.02 ಎಕರೆ ಖಾತೆ ಮಾಡಿರುವುದರಿಂದ ಈ ಕೆಳಕಂಡ ಅಧಿಕಾರಿ ಮತ್ತು ನೌಕರರನ್ನು ಸಿಸಿಎ ನಿಯಮ 10(1)(ಡಿ) & (3)ರನ್ವಯ ವಿಚಾರಣೆ ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಮೇಲೆ ಓದಲಾದ ಕ್ರ. ಸಂ. (2)ರಲ್ಲಿ ಮೇಲ್ಕಂಡ ಅಮಾನತ್ತಿನಲ್ಲಿರುವ ತಹಶೀಲ್ದಾರ್ ರವರ ಮನವಿಯಲ್ಲಿ 6 ತಿಂಗಳಿಗಿಂತ ಹೆಚ್ಚಾಗಿರುತ್ತದೆ. ಅಂದರೆ ದಿನಾಂಕ : 04–06–2011 ರಿಂದ 04–12–2011ಕ್ಕೆ 6 ತಿಂಗಳ ಅವಧಿ ಪೂರ್ಣಗೊಂಡಿರುತ್ತದೆ. ಆದ್ದರಿಂದ ನಂತರದ ಅವಧಿಗೆ ಅಂದರೆ 04–01–2012ರ ನಂತರದ ಅವಧಿಗೆ ಕೆ.ಸಿ.ಎಸ್.ಆರ್. ನಿಯಮ 98(1)ರನ್ವಯ ಜೀವನಾಧಾರ ಭತ್ಯೆಯನ್ನು ಶೇ. 75 ರಷ್ಟು ಹೆಚ್ಚಿಸಲು ಕೋರಿರುತ್ತಾರೆ.

ಅದರಂತೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 24 ಎಡಿಇ 2011, ಬೆಂಗಳೂರು, ದಿನಾಂಕ: 14–05–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್ ಇವರಿಗೆ ದಿನಾಂಕ: 04–01–2012ರ ನಂತರದ ಅಮಾನತ್ತಿನ ಅವಧಿಗೆ KCSR ನಿಯಮ 98(1) ರನ್ವಯ ಜೀವನಾಧಾರ ಭತ್ಯೆಯನ್ನು ಶೇ.75ರಷ್ಟನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ವಿ. ರಾಮಲಿಂಗಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1471**

## ಒಳಾಡಳಿತ ಸಚಿವಾಲಯ

**ವಿಷಯ :** 13ನೇ ಆರ್ಥಿಕ ಹಣಕಾಸು ಆಯೋಗದಡಿ ಕೈಗೊಳ್ಳಬೇಕಾದ ಕಾಮಗಾರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 7 ಪಿಎಫ್‌ಎಸ್ 2010, ದಿನಾಂಕ : 14–03–2012.

**2.** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : F.11(22)/FCD/2010, Dated : 14/03/2012.

**3.** ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : FD 01 FCC 2011, Dated : 21/03/2012.

**4.** ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 7 ಪಿಎಫ್‌ಎಸ್ 2010, ದಿನಾಂಕ : 27–03–2012.

**5.** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ : ತ–1 ಲೆಕ್ಕ–1/ಎಂಪಿಐಸಿ/212/2010–11, ದಿನಾಂಕ : 27/03/2012.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 13ನೇ ಆರ್ಥಿಕ ಹಣಕಾಸು ಯೋಜನೆಯಡಿಯಲ್ಲಿ ಅನುಮೋದಿತ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು ರೂ. 10.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕೇಂದ್ರ ಸರ್ಕಾರವು 13ನೇ ಆರ್ಥಿಕ ಹಣಕಾಸು ಆಯೋಗದಡಿ ಅನುಮೋದನೆಗೊಂಡ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು 2011–12ನೇ ಸಾಲಿಗೆ ರೂ. 3750.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಿರುತ್ತದೆ.

ಮೇಲೆ ಓದಲಾದ (3)ರ ಅನಧಿಕೃತ ಟಿಪ್ಪಣಿಯಲ್ಲಿ 13ನೇ ಆರ್ಥಿಕ ಹಣಕಾಸು ಆಯೋಗದಡಿ ಅನುಮೋದನೆಗೊಂಡ ಪೊಲೀಸ್ ತರಬೇತಿ ಕಾರ್ಯಕ್ರಮಗಳಿಗೆ ಬಳಸಿಕೊಳ್ಳಲು ಕೇಂದ್ರ ವಿತ್ತ ಸಚಿವಾಲಯವು ರೂ. 37.50 ಕೋಟಿಗಳ ಅನುದಾನವನ್ನು ಮಂಜೂರು ಮಾಡಿರುತ್ತದೆ. ಆದ್ದರಿಂದ ಸದರಿ ಅನುದಾನದಲ್ಲಿ ಈಗಾಗಲೇ ಬಿಡುಗಡೆ ಮಾಡಿರುವ ರೂ. 10.00 ಕೋಟಿಗಳನ್ನು ಹೊರತುಪಡಿಸಿ ಉಳಿದ ಬಾಕಿ ರೂ. 27.50 ಕೋಟಿಗಳ ಅನುದಾನವನ್ನು ಲೆಕ್ಕ ಶೀರ್ಷಿಕೆ 2055–00–003–0–06, XIII Finance Commission Grants 059 other expenditure (pln) ಅಡಿಯಲ್ಲಿ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಮಂಜೂರಾತಿ ನೀಡಿರುತ್ತದೆ.

ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ 13ನೇ ಆರ್ಥಿಕ ಹಣಕಾಸು ಯೋಜನೆಯಡಿ ಅನುಮೋದನೆಗೊಂಡ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು 2011–12ನೇ ಸಾಲಿಗೆ ರೂ. 27.50 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5)ರ ದಿನಾಂಕ : 27/03/2012ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಅರಕ್ಷಕ ಮಹಾ ನಿರ್ದೇಶಕರು, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, 13ನೇ ಆರ್ಥಿಕ ಹಣಕಾಸು ಆಯೋಗದಡಿಯಲ್ಲಿ ಅನುಮೋದನೆಗೊಂಡ ಕಾಮಗಾರಿಗಳನ್ನು ಕೈಗೊಳ್ಳಲು 2011–12ನೇ ಸಾಲಿಗೆ ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 7 ಪಿಎಫ್‌ಎಸ್ 2010 ದಿನಾಂಕ : 14/03/2010ರಂದು ರೂ. 10.00 ಕೋಟಿ ಮತ್ತು ದಿನಾಂಕ : 27/03/2012ರಂದು 27.50 ಕೋಟಿ ಒಟ್ಟು 37.50 ಕೋಟಿಗಳನ್ನು ಲೆಕ್ಕ ಶೀರ್ಷಿಕೆ 2055–00–003–0–06–059 ರಡಿಯಲ್ಲಿ ಸರ್ಕಾರವು ಬಿಡುಗಡೆ ಮಾಡಿರುತ್ತದೆ. ಸದರಿ ಅನುದಾನವನ್ನು ಅನುಮೋದಿತ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು 2011–12ನೇ ಆರ್ಥಿಕ ವರ್ಷದಲ್ಲಿ ಕಾಲಾವಕಾಶ ಕಡಿಮೆ ಇರುವುದರಿಂದ ಈ ಅನುದಾನವನ್ನು ಡಿಜಿ ಮತ್ತು ಐಜಿಪಿಯವರು ಸ್ವೀಕೃತಿ ರಸೀದಿ (Payee's Receipt) ಮೂಲಕ ಡ್ರಾ ಮಾಡಿ ಕೆ.ಎಸ್.ಪಿ.ಹೆಚ್.ಸಿ. ರವರಲ್ಲಿ ಠೇವಣಿ ಇಡಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಅರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 07 ಪಿಎಫ್‌ಎಸ್ 2010, ಬೆಂಗಳೂರು, ದಿನಾಂಕ: 30–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 13ನೇ ಆರ್ಥಿಕ ಹಣಕಾಸು ಯೋಜನೆಯಡಿಯಲ್ಲಿ ಅನುಮೋದಿತ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು ಒಟ್ಟು ರೂ. 37.50 ಕೋಟಿಗಳನ್ನು (ಮೂವತ್ತೇಳು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಡಿಜಿ ಮತ್ತು ಐಜಿಪಿಯವರು (Payee's Receipt) ನಲ್ಲಿ ಡ್ರಾ ಮಾಡಿ ಕೆ.ಎಸ್.ಪಿ.ಹೆಚ್.ಸಿ ರವರಲ್ಲಿ ಠೇವಣಿ ಇಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–003–0–06–059 ಇತರೆ ಖರ್ಚುಗಳು (ಯೋಜನೆ) ಇದರಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 81 ವೆಚ್ಚ–11/2012. ದಿನಾಂಕ : 30–03–2012ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ಪಿ.ಆರ್. 1349**

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1) ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 14 ಪಿಎಸ್‌ಆರ್ 2002, ದಿನಾಂಕ : 31–05–2002.
2) ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
3) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 539 ವೆಚ್ಚ–1/2012. ದಿನಾಂಕ : 25–04–2012.

**ಪ್ರಸ್ತಾವನೆ:–**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ

ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3. 2012–13ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 550.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.

4. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2012–13ನೇ ಸಾಲಿನ ಮೊದಲ ತ್ರೈಮಾಸಿಕ ಅವಧಿಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ. 150 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 16 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ: 09–05–2012**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2012–13ನೇ ಸಾಲಿನ ಮೊದಲ ತ್ರೈಮಾಸಿಕ ಅವಧಿಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ. 150 ಕೋಟಿ (ಒಂದುನೂರ ಐವತ್ತು ಕೋಟಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರ್ಯಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate) ನ್ನು ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 539 ವೆಚ್ಚ–1/2012 ದಿನಾಂಕ : 25–04–2012ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಪಿ.ಆರ್. 1408**

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬೈಲಹೊಂಗಲ ಬೆಳಗಾವಿ ಜಿಲ್ಲೆ ಇದರ 2010–11 ಹಾಗೂ 2011–12ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ: 30–09–2012ರೊಳಗಾಗಿ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರುರವರ ಪತ್ರ ಸಂಖ್ಯೆ : DSK/ESTS/44/2011-12, ದಿನಾಂಕ : 13–02–2012.

**ಪ್ರಸ್ತಾವನೆ:–**

ಮೇಲೆ ಓದಲಾದ ದಿನಾಂಕ : 13–02–2012ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಶ್ರೀ ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬೈಲಹೊಂಗಲ ಇದು ಆರ್ಥಿಕ ಸಂಕಷ್ಟಗಳನ್ನು ಎದುರಿಸುತ್ತಿರುವುದರಿಂದ, 2010–11 ನೇ ಸಾಲಿನ

ವಾರ್ಷಿಕ ಸಭೆಯನ್ನು ದಿನಾಂಕ : 31-03-2012ರೊಳಗಾಗಿ ಜರುಗಿಸಿ ತದನಂತರ 6 ತಿಂಗಳೊಳಗಾಗಿ 2011-12ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಜರುಗಿಸಿದರೆ, ಕಾರ್ಖಾನೆಯ ಆರ್ಥಿಕ ಸ್ಥಿತಿ ಮೇಲೆ ಅನಾವಶ್ಯಕವಾಗಿ ಹೆಚ್ಚಿನ ಭಾರ ಬೀಳುವುದಾಗಿ, ಮಳೆಗಾಲವು ಹೆಚ್ಚು ಕಡಿಮೆ ಆಗಿದ್ದರಿಂದ ಕಬ್ಬು ನುರಿಸುವ ಕಾರ್ಯವು ವಿಳಂಬವಾಗಿ ಪ್ರಾರಂಭವಾಗಿದ್ದು, ರೈತರು ಒಕ್ಕಣೆ ಕಾರ್ಯದಲ್ಲಿ ತೊಡಗಿರುವುದರಿಂದ, ಹಾಗೂ ಇತರೆ ಕಾರಣಗಳಿಂದ 2010-11 ಹಾಗೂ 2011-12ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ಒಟ್ಟಿಗೆ ದಿನಾಂಕ : 30-09-2012ರೊಳಗಾಗಿ ಜರುಗಿಸಲು ಕಾಲಾವಕಾಶ ವಿಸ್ತರಿಸಿ ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 22 ಸಂಮಾಸ 2012, ಬೆಂಗಳೂರು, ದಿನಾಂಕ : 15ನೇ ಮೇ 2012**

ಪ್ರಸ್ತಾವೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಸೋಮೇಶ್ವರ ಸಹಕಾರ ಸಂಘಗಳ ಕಾಯಿದೆ ನಿ., ಬೈಲಹೊಂಗಲ, ಬೆಳಗಾವಿ ಜಿಲ್ಲೆ ಇದರ 2010-11 ಹಾಗೂ 2011-12ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ : 30-09-2012ರೊಳಗಾಗಿ ಜರುಗಿಸಲು ಅನುವಾಗುವಂತೆ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ. ಎಂದರೆ,

**<u>27ರ ಪ್ರಕರಣದಲ್ಲಿ</u>**

27ನೇ ಪ್ರಕರಣ ಉಪಪ್ರಕರಣ (1)ರ ಪರಂತಕುದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ **"<u>ಹನ್ನೆರಡು ತಿಂಗಳು</u>"** ಎಂಬ ಪದಗಳನ್ನು ಪ್ರತಿಯೋಜಿಸಿದೆ.

**ಸೂಚನೆ:** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30-09-2012ರವರೆಗೆ ಜಾರಿಯಲ್ಲಿರತಕ್ಕದ್ದು ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪನಿಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಸಿ. ಸತೀಶ್,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ

**ಪಿ.ಆರ್. 1472** ಸಹಕಾರ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

### ಸುತ್ತೋಲೆ

**ಸಂಖ್ಯೆ : ಸಕಇ 214 ಬಿಸಿಎ 2011, ಬೆಂಗಳೂರು, ದಿನಾಂಕ : 23ನೇ ಮೇ, 2012.**

**ವಿಷಯ :** ಹೊಸ ಕೆನೆಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ 15(4)ರಂತೆ ವಿದ್ಯಾ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ 16(4)ರ ಮೇರೆಗೆ ನೇಮಕಾತಿಗಳಲ್ಲಿ ಮೀಸಲಾತಿಗಳು-ಸ್ಪಷ್ಟೀಕರಣ.

**ಉಲ್ಲೇಖ :** ಸರ್ಕಾರಿ ಆದೇಶ ಸಂಖ್ಯೆ : ಸಕಇ 225 ಬಿಸಿಎ 2000, ದಿನಾಂಕ : 30-03-2002.

ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಕೆನೆಪದರಕ್ಕೆ ಸಂಬಂಧಿಸಿದಂತೆ ಯಾವ ಯಾವ ವ್ಯಕ್ತಿಗಳು ಮೀಸಲಾತಿ ಸ್ಥಾನಗಳಿಗೆ ಅಥವಾ ಹುದ್ದೆಗಳಿಗೆ ಅರ್ಹರಾಗುವುದಿಲ್ಲ ಎಂಬುದನ್ನು ಸದರಿ ಆದೇಶ ಅನುಬಂಧ-2ರಲ್ಲಿ ನೀಡಲಾಗಿದೆ. ಆದರೆ ಈ ಹಿಂದೆ ಇದೇ ವಿಷಯದ ಬಗ್ಗೆ ಸಮಾಜ ಕಲ್ಯಾಣ ಇಲಾಖೆಯ ಪತ್ರ ಸಂಖ್ಯೆ ಸಕಇ 176 ಬಿಸಿಎ 2003, ದಿನಾಂಕ : 01-03-2005 ಇದರಲ್ಲಿ ಸ್ಪಷ್ಟೀಕರಣ ನೀಡಿ ಆದಾಯ ಮಿತಿ ಸರ್ಕಾರಿ ಗ್ರೂಪ್-ಸಿ ನೌಕರರ ಆದಾಯ ರೂ. 2.00 ಲಕ್ಷಕ್ಕೆ ಮೀರಿದ್ದರೂ ಸಹ ಮೀಸಲಾತಿಗೆ ಅರ್ಹರೆಂದು ಸ್ಪಷ್ಟೀಕರಿಸಿದ್ದಾರೆ. ಆದರೆ, ಅದನ್ನು ಪ್ರಶ್ನಿಸಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ : 19469/2005 ಸಲ್ಲಿಸಿದ್ದು ಅದರಲ್ಲಿ ಮಾನ್ಯ ಉಚ್ಚ ನ್ಯಾಯಾಲಯ ಸಮಾಜ ಕಲ್ಯಾಣ ಇಲಾಖೆಯಿಂದ ನೀಡಿರುವ ಪತ್ರ ದಿನಾಂಕ : 01-03-2005 ಇದನ್ನು ರದ್ದುಗೊಳಿಸಲಾಗಿದೆ. ಆದ್ದರಿಂದ, ಮೇಲ್ಕಂಡ ಪತ್ರ ದಿನಾಂಕ: 01-03-2005ಕ್ಕೆ ಯಾವುದೇ ಮಾನ್ಯತೆ ಇಲ್ಲವೆಂದು ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ : ಸಕಇ 200 ಬಿಸಿಎ 2005, ದಿನಾಂಕ: 06-04-2011ರಲ್ಲಿ ಸ್ಪಷ್ಟೀಕರಿಸಲಾಗಿದೆ. ಆದರೂ, ಇದಾದನಂತರ ಸದರಿ ವಿಷಯದ ಬಗ್ಗೆ ಮಾನ್ಯ ಕರ್ನಾಟಕ ಆಡಳಿತ ಮಂಡಳಿಯಲ್ಲಿ ಅರ್ಜಿ ಸಂಖ್ಯೆ : 7017/2010 ದಾಖಲಾಗಿದ್ದು, ಸದರಿ ಆದೇಶ ದಿನಾಂಕ: 29-06-2011ರಲ್ಲಿ ಮಾನ್ಯ ನ್ಯಾಯ ಮಂಡಳಿ ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಸದರಿ ವಿಷಯವನ್ನು ಪರಿಶೀಲಿಸಿ ಸ್ಪಷ್ಟೀಕರಣ ನೀಡಬೇಕೆಂದು ತಿಳಿಸಿದ್ದರಿಂದ ಈ ಕೆಳಕಂಡ ಸ್ಪಷ್ಟೀಕರಣ ನೀಡಲಾಗಿದೆ.

1) ಪತ್ರ ಸಂಖ್ಯೆ ಸಕಇ 176 ಬಿಸಿಎ 2003, ದಿನಾಂಕ : 01–03–2005 ಇದಕ್ಕೆ ಯಾವುದೇ ಮಾನ್ಯತೆ ಇಲ್ಲ.

2) ಸರ್ಕಾರಿ ಆದೇಶ ಸಂಖ್ಯೆ : ಸಕಇ 225 ಬಿಸಿಎ 2000, ದಿನಾಂಕ : 30–03–2002 ಅನುಬಂಧ–2ರ 3ನೇ ಅಂಶದ ಪ್ರಕಾರ ಅಭ್ಯರ್ಥಿಯ ಮತ್ತು ಅವರ ಪೋಷಕರ, ಸರ್ಕಾರಿ ಗ್ರೂಪ್–ಸಿ ಮತ್ತು ಗ್ರೂಪ್–ಡಿ ನೌಕರರನ್ನು ಒಳಗೊಂಡಂತೆ ವಾರ್ಷಿಕ ಒಟ್ಟು ಆದಾಯ ರೂ. 2.00 ಲಕ್ಷಕ್ಕೆ ಮೀರಿದ್ದರೆ ಅವರು ಕೆನೆಪದರ ನೀತಿಯಂತೆ ಮೀಸಲಾತಿಗೆ ಅರ್ಹರಿರುವುದಿಲ್ಲ. (ಈ ಆದಾಯ ಮಿತಿಯನ್ನು ಸರ್ಕಾರಿ ಆದೇಶ ಸಂಖ್ಯೆ : ಸಕಇ 104 ಬಿಸಿಎ 2011, ದಿನಾಂಕ : 06–02–2012 ರಿಂದ ರೂ. 3.50 ಲಕ್ಷಕ್ಕೆ ಹೆಚ್ಚಿಸಲಾಗಿದೆ.

**ನಂಜುಂಡಪ್ಪ,**
ಸರ್ಕಾರದ ಉಪ ಕಾರ್ಯದರ್ಶಿ–3,
ಸಮಾಜ ಕಲ್ಯಾಣ ಇಲಾಖೆ.

**ಪಿ.ಆರ್. 1475**

## ಇಂಧನ ಸಚಿವಾಲಯ

**ವಿಷಯ:** ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 122 ಎನ್‌ಸಿಇ 2001 ದಿನಾಂಕ: 29.11.2001.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 180 ಎನ್‌ಸಿಇ 2004 ದಿನಾಂಕ: 4.6.2004.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 517 ಎನ್‌ಸಿಇ 2008 ದಿನಾಂಕ: 08.05.2009.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 381 ಎನ್‌ಸಿಇ 2009, ದಿನಾಂಕ: 30.11.2010.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-396/Aremadanahalli MHS /2012/1168 ದಿನಾಂಕ: 12/19.04.2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂ/6ಡು ತಾಲ್ಲೂಕಿನಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸದರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್‌ನಿಂದ 1.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 122 ಎನ್‌ಸಿಇ 2001 ದಿನಾಂಕ: 29.11.2001 ಹಾಗೂ ಡಿಇ 180 ಎನ್‌ಸಿಇ 2004 ದಿನಾಂಕ: 4.6.2004 ರಲ್ಲಿ ಮೆ:: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ ಹಂಚಿಕೆಯಾಗಿದ್ದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 517 ಎನ್‌ಸಿಇ 2008 ದಿನಾಂಕ: 08.05.2009ರಲ್ಲಿ ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ ಹಂಚಿಕೆಯಾಗಿದ್ದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ರದ್ದುಪಡಿಸಿರುವುದನ್ನು ಪೂರ್ವಸ್ಥಿತಿಗೆ ತರಲಾಗಿತ್ತು, ಹಾಗೂ ಸದರಿ ಆದೇಶ ಹೊರಡಿಸಿದ 15 ತಿಂಗಳುಗಳ ಒಳಗಾಗಿ ಯೋಜನೆಯನ್ನು ಪೂರ್ಣಗೊಳಿಸತಕ್ಕದ್ದೆಂದು ಆದೇಶಿಸಲಾಗಿತ್ತು.

ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಯೋಜನೆಯ ಅನುಷ್ಠಾನಕ್ಕೆ ನೀಡಿರುವ ಅವಧಿಯು ದಿನಾಂಕ 29.2.2012ಕ್ಕೆ ಮುಕ್ತಾಯಗೊಂಡಿರುತ್ತದೆ. ಸದರಿ ಅಭಿವೃದ್ಧಿದಾರರು ಯೋಜನೆಗೆ ಸಂಬಂಧಪಟ್ಟಂತೆ ಎಲ್ಲಾ ಇಲಾಖೆಗಳ ಅನುಮೋದನೆಯನ್ನು ಪಡೆಯಲಾಗಿದೆ ಎಂದು ತಿಳಿಸುತ್ತಾ ಯೋಜನೆ ಅನುಷ್ಠಾನಕ್ಕೆ ಇನ್ನು ಒಂದು ವರ್ಷಗಳ ಕಾಲಾವಕಾಶವನ್ನು ವಿಸ್ತರಿಸುವಂತೆ ಕೋರಿರುವುದರಿಂದ ಯೋಜನಾ ಪ್ರದೇಶದ ಸ್ಥಳ ಪರಿಶೀಲನೆ ನಡೆಸಿ ಯೋಜನೆಯು ಪ್ರಗತಿಯಲ್ಲಿರುವ ಹಿನ್ನೆಲೆಯಲ್ಲಿ ಅಭಿವೃದ್ಧಿದಾರರ ಕೋರಿಕೆಯನ್ನು ಸೂಕ್ತವಾದ ನೆರವೇರಿಕೆ ಖಾತರಿ (Performance Guarantee) ಪಡೆದು ಪರಿಗಣಿಸಬಹುದಾಗಿದೆ ಎಂದು ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಇವರು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 88 ಎನ್‌ಸಿಇ 2012, ಬೆಂಗಳೂರು, ದಿನಾಂಕ: 15.05.2012.**

ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ ಹಂಚಿಕೆಯಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಮತ್ತೆ ಯಾವುದೇ ಕಾರಣಕ್ಕೂ ಕಾಲಾವಕಾಶವನ್ನು ವಿಸ್ತರಿಸುವುದಿಲ್ಲ ಹಾಗೂ ಪ್ರತಿ ಮೆಗಾ ವ್ಯಾಟ್‌ಗೆ ₹ 3.00 ಲಕ್ಷಗಳ ನೆರವೇರಿಕೆ ಖಾತರಿ (Performance Guarantee) ಕೆ.ಆರ್.ಇ.ಡಿ.ಎಲ್.ಗೆ ನೀಡತಕ್ಕದ್ದೆಂಬ ಷರತ್ತಿಗೊಳಪಟ್ಟು ಅಂತಿಮವಾಗಿ ಕಾಲಾವಕಾವನ್ನು ದಿನಾಂಕ 01.3.2012 ರಿಂದ ಒಂದು ವರ್ಷದವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**ಪಿ.ಆರ್. 1420**

## ಕನ್ನಡ, ಸಂಸ್ಕೃತಿ ಮತ್ತು, ವಾರ್ತಾ ಸಚಿವಾಲಯ

**ವಿಷಯ:** ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ ಹೆಚ್ಚುವರಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 253 ಕೆಎಂಯು 2007, ದಿನಾಂಕ 28.05.2008

2) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 151 ಕೆಎಂಯು 2010, ದಿನಾಂಕ 12.08.2010

3) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 104 ಕೆಎಂಯು 2010, ದಿನಾಂಕ 27.05.2011

4) ಆಯುಕ್ತರು, ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರ ಪತ್ರ ಸಂಖ್ಯೆ: ಹವಿಪಪ್ರನಿಪ್ರಾ/ಹೊ/09/2010–11/1396, ದಿನಾಂಕ 29.03.2012

**ಪ್ರಸ್ತಾವನೆ:**

ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ 17 ಹೊಸ ಹುದ್ದೆಗಳನ್ನು ಮೇಲೆ ಓದಲಾದ (1) ಸರ್ಕಾರದ ಆದೇಶದಲ್ಲಿ 2 ವರ್ಷಗಳ ಅವಧಿಗೆ ಸೃಜಿಸಿ ಆದೇಶಿಸಲಾಗಿದೆ. ಹಾಗೂ ಈ ಹುದ್ದೆಗಳನ್ನು ದಿನಾಂಕ 28.05.2010 ರಿಂದ 2 ವರ್ಷಗಳ ಅವಧಿಗೆ ಮೇಲೆ(2)ರಲ್ಲಿ ಓದಲಾದ ಆದೇಶದಲ್ಲಿ ಮುಂದುವರೆಸಲಾಗಿದೆ.

ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಮಂಜೂರಾಗಿರುವ ಒಂದು ಸಾಂಸ್ಕೃತಿಕ ಸಮನ್ವಯ ಅಧಿಕಾರಿ ಹುದ್ದೆಯನ್ನು ರದ್ದುಪಡಿಸಿ ಆರೋಗ್ಯ ನಿರೀಕ್ಷಕರ ಒಂದು ಹುದ್ದೆಯನ್ನು ಮೇಲೆ(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸೃಜಿಸಲಾಗಿದೆ, ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ 2002ರ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಗೂ ಪ್ರಾಧಿಕಾರದ ಮಹಾಯೋಜನೆ 2010ನ್ನು ಜಾರಿಗೊಳಿಸಲು ಪ್ರಾಧಿಕಾರಕ್ಕೆ ಮಂಜೂರಾದ ಹುದ್ದೆಗಳು ಅವಶ್ಯಕವಿರುವುದರಿಂದ ಈ ಹುದ್ದೆಗಳನ್ನು ದಿನಾಂಕ: 28.05.2012ರಿಂದ ಪುನ: ಎರಡು ವರ್ಷಗಳ ಅವಧಿಗೆ ಮುಂದುವರೆಸುವಂತೆ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 95 ಕೆಎಂಯು 2012, ಬೆಂಗಳೂರು, ದಿನಾಂಕ: 18.05.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಮಂಜೂರಾಗಿರುವ ಈ ಕೆಳಕಂಡ 17 ಹುದ್ದೆಗಳನ್ನು ದಿನಾಂಕ 28.05.2012 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ.

| ಕ್ರ. ಸಂ. | ಸೃಜಿಸಲಾದ ಹುದ್ದೆಯ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀಕ್ಷಕರು | 1 |
| 2. | ಪ್ರಥಮ ದರ್ಜೆ ಸಹಾಯಕರು | 2 |
| 3. | ವಾಹನ ಚಾಲಕ | 2 |
| 4. | ಸಿವಿಲ್ ಇಂಜಿನಿಯರ್ | 2 |
| 5. | ಸರ್ವೇಯರ್ಸ್ | 2 |
| 6. | ಯೋಜನಾ ವ್ಯವಸ್ಥಾಪಕರು | 1 |

| ಕ್ರ. ಸಂ. | ಸೃಜಿಸಲಾದ ಹುದ್ದೆಯ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 7. | ಸಂರಕ್ಷಣಾ ವಾಸ್ತುಶಿಲ್ಪಿ | 1 |
| 8. | ವಾಸ್ತುಶಿಲ್ಪಿ | 1 |
| 9. | ಆರ್ಕಿಯಾಲಜಿಸ್ಟ್ | 1 |
| 10. | ಆರೋಗ್ಯ ನಿರೀಕ್ಷಕರು | 1 |
| 11. | ಸಾಮಾಜಿಕ ಸಮನ್ವಯ ಅಧಿಕಾರಿ | 1 |
| 12. | GIS ವಿಶ್ಲೇಷಕರು | 1 |
| 13. | ಗ್ರಂಥಪಾಲಕರು | 1 |
| | ಒಟ್ಟು | 17 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–07–96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಗೀತಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1450** ಕನ್ನಡ, ಸಂಸ್ಕೃತಿ ಮತ್ತು, ವಾರ್ತಾ ಇಲಾಖೆ (ಆಡಳಿತ ಕನ್ನಡ).

## COMMERCE & INDUSTRIES SECRETARIAT

**Sub:** Sanction of special incentives & concessions to M/s Associate Décor Ltd. (Formerly known as M/s Star Panel Board) for the establishment of a unit to manufacture Particle Boards / High Pressure Laminates at Malur Industrial Area, Kolar District – reg.

**Ref:** 1. Government Order No. CI 244 SPI 2009, dated: 01.10.2009.

2. Government Order No. CI 289 SPI 2011 dated 28.12.2011.

3. Proceedings of Empowered Cabinet Sub Committee meeting held on 29.05.2012.

**PREAMBLE :**

The Project Proposal of M/s Associate Décor Ltd. (Formerly known as M/s Star Panel Board) to establish a wood based industry for manufacture of Particle Boards / High Pressure Laminates, MDF, Formaldehyde, Resins & Furniture Components with a production capacity of 3 lakh Cu. Mtrs. per annum and an investment of Rs.495.29 Cr. in 75 acres of land (60+10+5) in Malur Industrial Area, Kolar District, to generate direct employment to 750 persons was approved in the 18$^{th}$ SHLCC & 26$^{th}$ SHLCC meetings. Accordingly, Govt. Orders No. CI 244 SPI 2009 dated 1.10.2009 & No. CI 289 SPI 2011 dated 28.12.2011 were issued.

M/s Associate Décor Ltd. (Formerly known as M/s Star Panel Board) will use the wood from Eucalyptus crop grown by farmers to manufacture the above mentioned products by applying dry process technology developed by Germany.

As the proposed investment in the project is Rs.495.29 Cr., the industry is classified as Mega Industry and eligible to avail special incentives & concessions. 26$^{th}$ SHLCC has recommended for sanction of special incentives & concessions in its proceedings.

M/s Associate Décor Ltd. (Formerly known as M/s Star Panel Board) has requested for sanction of following special incentives and concessions:

a) Interest free loan on 100% gross VAT for a period of 12 years on 100% fixed assets.

b) Electricity Tariff Concession of Rs.1/- per unit and exemption of electricity tax for a period of 12 years and exemption of security deposit and monthly minimum deposit.

c) 100% refund of ESI/EPF paid to employees for a period of 12 years.

d) Anchor unit subsidy of Rs.3 Cr.

e) Subsidy for setting of ETP Rs.3 Cr.

f) Exemption from payment of entry tax for a period of 4 years during implementation and 12 years during production period on purchase of raw materials, consumables, spares etc.

g) Exemption from payment of forest development tax for a period of 12 years.

h) Exemption/refund of works contract tax including civil construction and structural for a period of 6 years from the date of construction.

Commissioner for ID & Director of I&C has recommended for consideration of the following incentives vide his letter dated 9.9.2009:

a) Interest free loan on 100% gross VAT for a period of 12 years on 50% fixed assets.

b) Exemption of electricity tax for a period of 12 years.

c) 100% refund of ESI/EPF paid to employees for a period of 12 years.

d) Anchor unit subsidy may be extended from Rs.1 Cr. to Rs.2 Cr.

e) Exemption from payment of entry tax for a period of 4 years during implementation and 12 years during production period.

f) Regarding exemption of APMC cess & forest development tax may be extended on the opinion of respective departments.

Finance Department has communicated its opinion on the subject vide its note No. FD 67 CSL 2012 dated 23.05.2012.

The Empowered Cabinet Sub Committee carefully examined the proposal in detail in its meeting held on 29.05.2012. Government has considered the recommendations of Empowered Cabinet Sub Committee in all its aspects and hence this order.

**GOVERNMENT ORDER NO. CI 289 SPI 2011, BANGALORE, DATED: 05.06.2012**

In the circumstances explained in the preamble the Government is pleased to sanction following special incentives & concessions to M/s Associate Décor Ltd. for their investment proposal at Malur Industrial Area, Kolar District:

1. 75% of the eligible gross VAT as soft loan for 10 years from the date of commencement of commercial production to be repaid in 10 annual equal installments starting from the eleventh year, not exceeding 50% of the investment made by the unit.

2. 95% of the CST generated by inter-state sales of the end products to be reimbursed in the initial 5 years.

3. Exemption from payment of electricity duty in the initial 5 years from the date of commencement of commercial production on the power supply received from ESCOMs or power utilized from captive generation.

4. Eligible Gross VAT should be worked out based on the following principles.

   i. For sales made by the industrial unit meant for final consumers within the state, the Gross VAT on this transaction will be the Eligible Gross VAT.

   ii. For sales made by the industrial unit to other dealers within the state who in turn make inter-state sales, stock transfer or export sales, the buying dealer(s) will be eligible to claim ITC equivalent to Gross VAT on this turnover. The Gross VAT on this turnover will not be eligible for the loan incentive.

iii. Any sales or purchase between the company and its ancillary units or downstream units will be eligible for the VAT loan in the hands of one entity only. The same transaction will not be considered for the VAT loan twice in case both seller and purchaser having incentive packages.

5. The unit is eligible to avail **other** normal incentives and concessions as per the Industrial Policy 2009-14.

By order and in the name of Governor of Karnataka

**JYOTHI.R.J**
Desk Officer (Technical Cell)
Commerce & Industries Department

PR - 1721

## ಒಳಾಡಳಿತ ಸಚಿವಾಲಯ

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಕಿರಿಯ) ವೃಂದದ ಅಧಿಕಾರಿಗಳ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 604 ಪಿಪಿಇ 2011, ದಿನಾಂಕ 28.04.2012.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್ / ಸಿಶಾ–1 /170/ 2011–12, ದಿನಾಂಕ 30.04.2012.

**ಪ್ರಸ್ತಾವನೆ:–**

ಮೇಲೆ ಓದಲಾದ (1) ರ ಸರ್ಕಾರದ ಅಧಿಸೂಚನೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಈ ಕೆಳಕಂಡ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಕಿರಿಯ) ಗಳಿಗೆ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸ್ಥಾನಪನ್ನ ಬಡ್ತಿಯನ್ನು ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಈ ಕೆಳಕಂಡ ಅಧಿಕಾರಿಗಳ ಸ್ಥಾನಪನ್ನ ಅವಧಿಯಲ್ಲಿ ಅವರಿಗೆ ಸಂಬಂಧಪಟ್ಟಂತೆ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇಲ್ಲದೇ ಇದ್ದು, ಅವರುಗಳ ಸೇವೆಯು ಸದರಿ ಅವಧಿಯಲ್ಲಿ ತೃಪ್ತಿಕರವಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 19(3)(ಸಿ) ಪ್ರಕಾರ, ಸದರಿ ಅಧಿಕಾರಿಗಳ ಸ್ಥಾನಪನ್ನ ಅವಧಿ ತೃಪ್ತಿಕರವೆಂದು ಘೋಷಿಸುವಂತೆ ಕೋರಿರುತ್ತಾರೆ.

| | | | |
|---|---|---|---|
| 1) | ಎಸ್.ಎಸ್. ಹಿರೇಮನಿ | 2) | ಎಂ.ಹೆಚ್. ಜಗದಾಳೆ |
| 3) | ಕೆ.ಶಿವಪ್ರಸಾದ್ ಆಳ್ವ | 4) | ಕೆ.ಹೆಚ್. ಶ್ರೀಮತಿ |
| 5) | ಅಜಿತ್‌ಕುಮಾರ್ ಡಿ. ಹಮಿಗಿ | 6) | ಭೀಮಾಶಂಕರಂಬಲಗಿ |
| 7) | ಜೈಲಜ ಎಂ. ಪಾಟೀಲ್ | 8) | ಎ.ಪಿ. ಫಿರೋಜ್‌ಖಾನ್ |
| 9) | ಚನ್ನಪ್ಪ ಜಿ.ಹರಸೂರ | 10) | ಎಸ್.ಆರ್. ಸೂಡಿ |
| 11) | ಎಸ್.ಎಂ. ನಾಗಪ್ಪ | 12) | ವಿ.ಜಿ. ಯಳಗೇರಿ |
| 13) | ಜೆ.ಕಮಲ | 14) | ಕೆ.ಜಿ. ಪುರಾಣಿಕಮಠ್ |
| 15) | ಜೆ.ಎಲ್. ಪವಾರ್ | 16) | ಕೆ.ಪುಸ್ಪರಾಜ್ |
| 17) | ಕೆ.ಕೊಟ್ರೇಗೌಡ | 18) | ಎಸ್.ವಿ. ಭಟ್ |
| 19) | ಸಿ.ಎಂ. ಬೆಳಲದವರ್ | 20) | ಎಂ.ಎ. ಪಾಟೀಲ್ |
| 21) | ಆರುಂಧತಿ ಗುರುರಾಜರಾವ್ | 22) | ಡಿ.ಎ. ಭಾಂಡೇಕರ್ |

| | | | |
|---|---|---|---|
| 23) | ಆನಂದ ಎಂ.ಹೊಸಮನಿ | 24) | ಎಸ್.ಎ. ಪಾಸ್ತೆ |
| 25) | ಪಿ.ಆರ್. ಹೊಸಳ್ಳಿ ಮಠ್ | 26) | ಮಲ್ಲರಾಜೇಗೌಡ |
| 27) | ಹೆಚ್.ಇ. ಚಿನ್ನಪ್ಪ | 28) | ಎನ್.ಆರ್. ಲೋಕೇಶ್ |
| 29) | ಆರ್. ಬಾಲಕೃಷ್ಣ | 30) | ಬಷೀರ್ ಅಹಮದ್ ಇಬ್ರಾಹಿಂ |
| 31) | ಕಲ್ಯಾಣರಾವ್ ಕುಲಕರ್ಣಿ | 32) | ಪಾಟೀಲ್ ಸಿದ್ದನಗೌಡ ವೀರಭದ್ರಗೌಡ |
| 33) | ಎಂ.ಎ.ಬ್ಯಾಳಿರೊಟ್ಟಿ | 34) | ಎಂ.ಚಂದ್ರಪ್ಪ |
| 35) | ಬಲಭೀಮ | 36) | ಸಿಂಗೆಚಾಂಗದೇವ |
| 37) | ಬಿ.ಕೆ. ಕಾಮಾಕ್ಷಿ | | |

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 221 ಪಿಪಿಇ 2012, ಬೆಂಗಳೂರು, ದಿನಾಂಕ:19ನೇ ಮೇ 2012**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 19(3)(ಸಿ)ರ ಪ್ರಕಾರ ಈ ಕೆಳಕಂಡ ತ:ಖ್ತೆಯಲ್ಲಿ ಅಂಕಣ (2)ರಲ್ಲಿ ನಮೂದಿಸಿರುವ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಕಾನೂನು ಅಧಿಕಾರಿ (ಕಿರಿಯ) ಅವರ ಹೆಸರಿನ ಮುಂದೆ ಅಂಕಣ (5)ರಲ್ಲಿ ನಮೂದಿಸಿರುವ ದಿನಾಂಕದಿಂದ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಿಸಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ / ಶ್ರೀಮತಿ | ಈಗಿನ ಉದ್ಯೋಗ ವೃಂದಕ್ಕೆ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಮುಕ್ತಾಯಗೊಂಡ ದಿನಾಂಕ | ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಣೆ ಮಾಡಿದ ದಿನಾಂಕ |
|---|---|---|---|---|
| **1** | **2** | **3** | **4** | **5** |
| 1) | ಎಸ್.ಎನ್. ಹಿರೇಮನಿ,<br>ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 11ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ | 11.08.2008 | 10.08.2009 | 11.08.2009 |
| 2) | ಎಂ.ಹೆಚ್. ಜಗದಾಳೆ,<br>ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬಾಗಲಕೋಟೆ | 21.08.2008 | 20.08.2009 | 21.08.2009 |
| 3) | ಕೆ.ಶಿವಪ್ರಸಾದ್ ಆಳ್ವ,<br>ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಉಡುಪಿ | 21.08.2008 | 20.08.2009 | 21.08.2009 |
| 4) | ಕೆ.ಹೆಚ್. ಶ್ರೀಮತಿ,<br>ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕ ಕಛೇರಿ, ತುಮಕೂರು | 21.08.2008 | 20.08.2009 | 21.08.2009 |
| 5) | ಅಜಿತ್‌ಕುಮಾರ್ ಹಮಿಗಿ,<br>ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಮಂಗಳೂರು | 13.08.2008 | 12.08.2009 | 13.08.2009 |
| 6) | ಭೀಮಾಶಂಕರ ಅಂಬಲಗಿ,<br>ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕ ಕಛೇರಿ, ಬೀದರ್ | 27.08.2008 | 26.08.2009 | 27.08.2009 |

| ಕ್ರ ಸಂ. | ಅಧಿಕಾರಿಯ ಹೆಸರು ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ / ಶ್ರೀಮತಿ | ಈಗಿನ ಉದ್ಯೋಗ ವೃಂದಕ್ಕೆ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಮುಕ್ತಾಯಗೊಂಡ ದಿನಾಂಕ | ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಣೆ ಮಾಡಿದ ದಿನಾಂಕ |
|---|---|---|---|---|
| 1 | 2 | 3 | 4 | 5 |
| 7) | ಶೈಲಜ ಎಂ. ಪಾಟೀಲ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಕಾರವಾರ | 21.08.2008 | 20.08.2009 | 21.08.2009 |
| 8) | ಎ.ಪಿ. ಫಿರೋಜ್‌ಖಾನ್, ಕಾನೂನು ಅಧಿಕಾರಿ (ಕಿರಿಯ), ಕಾನೂನು ಅಧಿಕಾರಿ (ಹಿರಿಯ) ಇವರ ಕಛೇರಿ, ಮೈಸೂರು | 20.08.2008 | 19.08.2009 | 20.08.2009 |
| 9) | ಚನ್ನಪ್ಪ ಜಿ. ಹರಸೂರ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಎಂ.ಎಂ. (ಸಂಚಾರಿ) ನ್ಯಾಯಾಲಯ, ಬೆಂಗಳೂರು ನಗರ | 21.08.2008 | 20.08.2009 | 21.08.2009 |
| 10) | ಎಸ್.ಆರ್. ಸೂಡಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಎ.ಸಿ.ಜೆ.ಎಂ. ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ | 27.08.2008 | 26.08.2009 | 27.08.2009 |
| 11) | ಎಸ್.ಎಂ. ನಾಗಪ್ಪ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 9ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ | 11.08.2008 | 10.08.2009 | 11.08.2009 |
| 12) | ವಿ.ಜಿ. ಯಳಗೇರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಗದಗ | 14.08.2008 | 13.08.2009 | 14.08.2009 |
| 13) | ಜೆ.ಕಮಲ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ | 22.08.2008 | 21.08.2009 | 22.08.2009 |
| 14) | ಕೆ.ಜಿ. ಪುರಾಣಿಕ್‌ಮಠ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಸಿ.ಜೆ.ಎಂ. ನ್ಯಾಯಾಲಯ, ಧಾರವಾಡ | 28.08.2008 | 27.08.2009 | 28.08.2009 |
| 15) | ಜೆ.ಎಲ್. ಪವಾರ್, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕರ ಕಛೇರಿ, ಗದಗ | 22.08.2008 | 21.08.2009 | 22.08.2009 |
| 16) | ಕೆ.ಪುಷ್ಪರಾಜ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ.ಎಂ. ನ್ಯಾಯಾಲಯ, ಉಡುಪಿ | 19.08.2008 | 18.08.2009 | 19.08.2009 |
| 17) | ಕೆ.ಕೊಟ್ರೇಗೌಡ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ದಾವಣಗೆರೆ | 18.08.2008 | 17.08.2009 | 18.08.2009 |

| ಕ್ರ ಸಂ. | ಅಧಿಕಾರಿಯ ಹೆಸರು ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ / ಶ್ರೀಮತಿ | ಈಗಿನ ಉದ್ಯೋಗ ವೃಂದಕ್ಕೆ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಮುಕ್ತಾಯಗೊಂಡ ದಿನಾಂಕ | ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಣೆ ಮಾಡಿದ ದಿನಾಂಕ |
|---|---|---|---|---|
| 1 | 2 | 3 | 4 | 5 |
| 18) | ಎಸ್.ವಿ. ಭಟ್, ಕಾನೂನು ಅಧಿಕಾರಿ (ಕಿರಿಯ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | 25.08.2008 | 24.08.2009 | 25.08.2009 |
| 19) | ಸಿ.ಎಂ. ಬೆಳಲದವರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಎಂ.ಎಂ. (ಸಂಚಾರಿ) ನ್ಯಾಯಾಲಯ, ಬೆಂಗಳೂರು ನಗರ | 28.08.2008 | 27.08.2009 | 28.08.2009 |
| 20) | ಎಂ.ಎ. ಪಾಟೀಲ್, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕರ ಕಛೇರಿ, ಕೊಪ್ಪಳ | 29.08.2008 | 28.08.2009 | 29.08.2009 |
| 21) | ಆರುಂಧತಿ ಗುರುರಾಜರಾವ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 8ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ | 05.09.2008 | 04.09.2009 | 05.09.2009 |
| 22) | ಡಿ.ಎ. ಭಾಂಡೇಕರ್, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕರ ಕಛೇರಿ, ಧಾರವಾಡ | 11.08.2008 | 10.08.2009 | 11.08.2009 |
| 23) | ಆನಂದ ಎಂ. ಹೊಸಮನಿ, ಕಾನೂನು ಅಧಿಕಾರಿ (ಕಿರಿಯ), ಕಾನೂನು ಅಧಿಕಾರಿ (ಹಿರಿಯ) ಇವರ ಕಛೇರಿ, ಮೈಸೂರು | 25.07.2008 | 24.07.2009 | 25.07.2009 |
| 24) | ಎಸ್.ಎ.ಪಾಸ್ತೆ, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕರ ಕಛೇರಿ, ಬಳ್ಳಾರಿ | 25.08.2008 | 24.08.2009 | 25.08.2009 |
| 25) | ಪಿ.ಆರ್. ಹೊಸಳ್ಳಿ ಮಠ್, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕರ ಕಛೇರಿ, ಬಿಜಾಪುರ | 04.09.2008 | 03.09.2009 | 04.08.2009 |
| 26) | ಮಲ್ಲರಾಜೇಗೌಡ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಹಾಸನ | 29.08.2008 | 28.08.2009 | 29.08.2009 |
| 27) | ಹೆಚ್.ಇ. ಚಿನ್ನಪ್ಪ, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಆಯುಕ್ತರ ಕಛೇರಿ, ಮೈಸೂರು | 07.08.2008 | 06.08.2009 | 07.08.2009 |
| 28) | ಎನ್.ಆರ್. ಲೋಕೇಶ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ರಾಮನಗರ | 18.08.2008 | 17.08.2009 | 18.08.2009 |

| ಕ್ರ ಸಂ. | ಅಧಿಕಾರಿಯ ಹೆಸರು ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ / ಶ್ರೀಮತಿ | ಈಗಿನ ಉದ್ಯೋಗ ವೃಂದಕ್ಕೆ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಮುಕ್ತಾಯಗೊಂಡ ದಿನಾಂಕ | ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಣೆ ಮಾಡಿದ ದಿನಾಂಕ |
|---|---|---|---|---|
| 1 | 2 | 3 | 4 | 5 |
| 29) | ಆರ್.ಬಾಲಕೃಷ್ಣ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಚಿಕ್ಕಬಳ್ಳಾಪುರ | 13.08.2008 | 12.08.2009 | 13.08.2009 |
| 30) | ಬಷೀರ್ ಅಹಮದ್ ಮಖಾಂದಾರ್, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಆಯುಕ್ತರ ಕಛೇರಿ, ಹುಬ್ಬಳ್ಳಿ-ಧಾರವಾಡ | 09.08.2008 | 08.08.2009 | 09.08.2009 |
| 31) | ಕಲ್ಯಾಣರಾವ್ ಕುಲಕರ್ಣಿ, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕರ ಕಛೇರಿ, ಚಿಕ್ಕಮಗಳೂರು | 28.08.2008 | 27.08.2009 | 28.08.2009 |
| 32) | ಪಾಟೀಲ್ ಸಿದ್ದನಗೌಡ ವೀರಭದ್ರಗೌಡ, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕ ಕಛೇರಿ, ದಾವಣಗೆರೆ | 12.08.2008 | 11.08.2009 | 12.08.2009 |
| 33) | ಎಂ.ಎ. ಬ್ಯಾಳಿರೊಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬಳ್ಳಾರಿ | 01.09.2008 | 31.08.2009 | 01.09.2009 |
| 34) | ಎಂ.ಚಂದ್ರಪ್ಪ, ಕಾನೂನು ಅಧಿಕಾರಿ (ಕಿರಿಯ), ಪೊಲೀಸ್ ಅಧೀಕ್ಷಕರ ಕಛೇರಿ, ಚಿತ್ರದುರ್ಗ | 18.08.2008 | 17.08.2009 | 18.08.2009 |
| 35) | ಬಲಭೀಮ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಗುಲ್ಬರ್ಗ | 20.10.2008 | 19.10.2009 | 20.10.2009 |
| 36) | ಸಿಂಗೆಚಾಂಗದೇವ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಎಂ.ಎಂ (ಸಂಚಾರಿ) ನ್ಯಾಯಾಲಯ, ಬೆಂಗಳೂರು ನಗರ | 07.08.2008 | 06.08.2009 | 07.08.2009 |
| 37) | ಬಿ.ಕೆ.ಕಾಮಾಕ್ಷಿ, ಕಾನೂನು ಅಧಿಕಾರಿ (ಕಿರಿಯ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | 18.08.2008 | 17.08.2009 | 18.08.2009 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ,

(ಪೊಲೀಸ್ ಸೇವೆಗಳು-'ಬಿ')

**ಪಿ.ಆರ್. 1497**